ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ



# ಕಲಿಕಾ ನ್ಯೂನತೆ








ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ಬೆಳವಣಿಗೆ ನ್ಯೂನತೆಗಳುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ

ಭಾಗ–2 ಘಟಕ–3

# ಕಲಿಕಾ ನ್ಯೂನತೆ









ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು–6

# ನಮ್ಮ ಧ್ಯೇಯ

1966ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸ್ವಾಯತ್ತ ಸಂಸ್ಥೆಯಾಗಿ ಹುಟ್ಟು ಪಡೆದ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್ ಶ್ರವಣ ನ್ಯೂನತೆಗಳುಳ್ಳ ಜನರಿಗಾಗಿ ಸೇವೆ ಸಲ್ಲಿಸುತ್ತಿದೆ. ಚಿಕಿತ್ಸೆ, ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ.

ನಮ್ಮ ದೇಶದ ಶೇ.10 ರಷ್ಟು ಮಕ್ಕಳು ಒಂದಲ್ಲಾ ಒಂದು ರೀತಿಯ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳಿಗೆ ತುತ್ತಾಗಿದ್ದಾರೆ ಎಂದು ಅಂಕಿ-ಅಂಶಗಳಿಂದ ತಿಳಿದು ಬರುತ್ತದೆ. ಇಂತಹ ಮಕ್ಕಳನ್ನು ಶೀಘ್ರವಾಗಿ ಗುರುತಿಸಿ, ಭವಿಷ್ಯದಲ್ಲಿ ಅವರಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗುವಂತೆ ಚಿಕಿತ್ಸೆ ಹಾಗೂ ತರಬೇತಿ ನೀಡುವುದು ಅತಿ ಅವಶ್ಯಕ. ಆದರೆ ಈ ರೀತಿಯ ಚಿಕಿತ್ಸೆ ಮತ್ತು ತರಬೇತಿ ನೀಡುವ ತಜ್ಞರ ಸಂಖ್ಯೆ ಬಹಳ ಕಡಿಮೆ ಇರುವುದು ವಾಸ್ತವ ಸಂಗತಿ. ಇಂತಹ ವಾಕ್-ಶ್ರವಣ ತಜ್ಞರ ಸೇವೆ ಎಲ್ಲಿ ಬೇಕೋ ಅಲ್ಲಿ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಕೆಲಸ ಮಾಡಲು ಮುಂದೆ ಬರುವವರೇ ಇಲ್ಲ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ತೊಂದರೆ ಇರುವ ಲಕ್ಷಾಂತರ ಜನರನ್ನು ನಮ್ಮ ಸಲಹೆ ಸೂಚನೆ ಸೇವೆಗಳನ್ನು ಪಡೆಯಲು ನಗರ ಪ್ರದೇಶಗಳಲ್ಲಿ ಇರುವಂತಹ ನಮ್ಮ ಸಂಸ್ಥೆಗಳಿಗೆ ಬನ್ನಿ ಎಂದು ಕರೆಯುವುದು ಸಮಂಜಸವಲ್ಲ. ಆದುದರಿಂದ ಮಾತು-ಕೇಳುವಿಕೆಯ ತೊಂದರೆಗಳಿರುವ ಜನರ ಸುತ್ತಮುತ್ತ ಇರುವ ಸಮುದಾಯದ ಒಂದು ವರ್ಗದ ಜನರನ್ನು ಆರಿಸಿ ಅವರಿಗೆ ಸೂಕ್ತ ತರಬೇತಿ ನೀಡಿದರೆ, ನಮ್ಮ ಗ್ರಾಮೀಣ ಪ್ರದೇಶದ ಜನರ ಬವಣೆ ಸ್ವಲ್ಪವಾದರೂ ನೀಗಬಹುದೆಂದು ನಮ್ಮ ಅನಿಸಿಕೆ.

ಈ ದಿಕ್ಕಿನಲ್ಲಿ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಪೋಷಕರನ್ನು ಗಮದಲ್ಲಿಟ್ಟುಕೊಂಡು ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ ಒಂದು ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಿದೆ. ಈ ತರಬೇತಿ ಕಾರ್ಯಕ್ರಮವು ಅಂಚೆ ತೆರಪಿನ ಶಿಕ್ಷಣದ ಮೂಲಕ ನಡೆಯುವಂತೆ ಯೋಜಿಸಲಾಗಿದ್ದು, ಸಂವಹನ ನ್ಯೂನತೆಯ ಮಕ್ಕಳ ತರಬೇತಿಯಲ್ಲಿ ಒಂದು ಹೊಸ ಆಯಾಮವನ್ನು ಹುಟ್ಟುಹಾಕಿದೆ. ಶ್ರವಣದೋಷ, ಮಾತು-ಕೇಳುವಿಕೆಯ ದೋಷವಿರುವ 'ಪ್ರತಿಯೊಂದು ಮಗುವಿಗೂ ಈ ಆರೈಕೆ/ಸೇವೆ ತಲುಪುವಂತಾಗಬೇಕು. ಅವರೆಲ್ಲರ ನಾಳೆಯ ಬದುಕು ಹಸನಾಗಬೇಕು' ಎಂಬುದೇ ನಮ್ಮ ಕನಸು ಮತ್ತು ಧ್ಯೇಯ.

ಮಾತು-ಕೇಳುವಿಕೆಯ ನ್ಯೂನತೆಯಿರುವ ಮಕ್ಕಳ ತರಬೇತಿಗಾಗಿ ಪೋಷಕರಿಗೆ ರೂಪಿಸಿರುವ ಈ ಕಾರ್ಯಕ್ರಮವು ಹಲವು ಅಂಶಗಳಲ್ಲಿ ಪೋಷಕರಿಗೆ ತರಬೇತಿಯನ್ನು ನೀಡುತ್ತದೆ. ತೊಂದರೆಗಳ ಗುರುತಿಸುವಿಕೆ, ತಡೆಗಟ್ಟುವಿಕೆ, ನಿರ್ವಹಣೆ, ಇಂತಹ ಮಕ್ಕಳ ತರಬೇತಿ, ಸರ್ಕಾರದಿಂದ ಇಂತಹ ಮಕ್ಕಳಿಗೆ ನೀಡಲಾಗಿರುವ ವಿಶೇಷ ಸೌಲಭ್ಯ-ಸವಲತ್ತು-ಹಕ್ಕುಗಳ ಬಗ್ಗೆ ಮಾಹಿತಿ, ಸರ್ಕಾರದ ಕಾರ್ಯಕ್ರಮಗಳು-ಕಾನೂನುಗಳ ಬಗ್ಗೆ ತಿಳುವಳಿಕೆ, ಇತ್ಯಾದಿ. ಅತಿ ಮುಖ್ಯವಾಗಿ, ಮಾತು-ಕೇಳುವಿಕೆಗೆ ಸಂಬಂಧಪಟ್ಟ ನ್ಯೂನತೆಗಳುಳ್ಳ ಮಕ್ಕಳಿಗೆ ಮನೆಯಲ್ಲೇ ನಡೆಸಬಹುದಾದ ತರಬೇತಿ. ಇದಕ್ಕಾಗಿ ನಾಲ್ಕು ಭಾಗಗಳ ಒಂದು ತರಬೇತಿ ಕಾರ್ಯಕ್ರಮವನ್ನು ಸಂಸ್ಥೆಯು ರೂಪಿಸಿದೆ. ಭಾಗ 1, 3, ಮತ್ತು 4 ಎಲ್ಲರಿಗೂ ಕಡ್ಡಾಯ. ಭಾಗ 2 ರಲ್ಲಿ ನಾಲ್ಕು ವಿಷಯಗಳಿದ್ದು, ಪ್ರತಿಯೊಬ್ಬರೂ ಕಡ್ಡಾಯವಾಗಿ ಎರಡು ವಿಷಯಗಳನ್ನು ಅಭ್ಯಸಿಸಬೇಕು. ಈ ತರಬೇತಿಯ ವಿಶೇಷವೆಂದರೆ ಪೋಷಕರಿಗೆ ತಮ್ಮ ಮಕ್ಕಳಲ್ಲಿರುವ ತೊಂದರೆಯ ಬಗ್ಗೆ ಮಾತ್ರ ಅಲ್ಲ, ಉಳಿದ ತೊಂದರೆಗಳ ಬಗ್ಗೆಯೂ ಅಭ್ಯಾಸ ಮಾಡಲು ಭಾಗ 2 ರಲ್ಲಿ ಅವಕಾಶ-ಪ್ರೋತ್ಸಾಹ ನೀಡಲಾಗುವುದು.

ಪ್ರಸ್ತುತ ಅಂಚೆ ತೆರಪಿನ ಶಿಕ್ಷಣದ ಮೂಲಕ ಕನ್ನಡದಲ್ಲಿ ತರಬೇತಿಯನ್ನು ಆರಂಭಿಸುತ್ತಿದ್ದೇವೆ. ಮುಂದೆ ಇಂಗ್ಲೀಷ್, ಹಿಂದಿ, ಮಲಯಾಳಂ ಮತ್ತು ನಮ್ಮ ದೇಶದ ಇತರ ಮುಖ್ಯ ಭಾಷೆಗಳಲ್ಲೂ ಸಹ ತರಬೇತಿಯನ್ನು ಪ್ರಾರಂಭಿಸುತ್ತೇವೆ. ಈ ತರಬೇತಿ ಎಸ್. ಎಸ್.ಎಲ್.ಸಿ (10 ನೇ ತರಗತಿ)ಯಲ್ಲಿ ಉತ್ತೀರ್ಣರಾಗಿರುವ ಎಲ್ಲಾ ಪೋಷಕವರ್ಗದವರಿಗೂ ಲಭ್ಯವಿದೆ.

ಈ ಸರ್ಟಿಫಿಕೇಟ್ ಪಠ್ಯ ಕ್ರಮ ಮಾತು-ಭಾಷೆ-ಕೇಳುವಿಕೆಯ ತೊಂದರೆಗಳುಳ್ಳ ಮಕ್ಕಳ ತಂದೆ ತಾಯಿಯರಿಗೆ ವಿಶೇಷವಾಗಿ ರೂಪಿಸಲ್ಪಟ್ಟಿದ್ದರೂ ಕೂಡ, ಹೆಚ್ಚಿನ ಸಂಖ್ಯೆಯಲ್ಲಿ ತಾಯಂದಿರು, ನಮ್ಮ ಸೋದರಿಯರು ಇದರ ಪ್ರಯೋಜನ ಪಡೆಯಲಿ ಎಂದು ನಮ್ಮ ಆಸೆ. ಏಕೆಂದರೆ ಒಂದು ಮಗುವಿನ ಶಿಕ್ಷಣದಲ್ಲಿ, ಪಾಲನೆ-ಪೋಷಣೆಯಲ್ಲಿ, ಬೇಕು-ಬೇಡಗಳನ್ನು ಗುರುತಿಸುವಲ್ಲಿ, ತಾಯಿಯರಿಗೆ ಸರಿಸಮನಾಗಿ ಯಾರೂ ನಿಲ್ಲಲಾರರು. ಒಂದು ಸಂಸಾರದಲ್ಲಿ ಓದು ಬರಹ ಬಲ್ಲ ಒಬ್ಬಳು ಹೆಣ್ಣಿದ್ದರೆ, ಇಡೀ ಸಂಸಾರವೇ ಮುಂದೆ ಬರುತ್ತದೆ ಎಂದು ನಾಣ್ಣುಡಿಯೇ ಇದೆಯಲ್ಲ! ಈ ರೀತಿ ತರಬೇತಿ ಪಡೆದ ಒಬ್ಬ ತಾಯಿ, ತನ್ನ ಮಕ್ಕಳಿಗಷ್ಟೇ ಅಲ್ಲ, ತನ್ನ ಸುತ್ತಮುತ್ತಲಿರುವ ಎಲ್ಲಾ ಮಕ್ಕಳಿಗೂ ದಾರಿದೀಪವಾಗಬಲ್ಲಳು.

ಈ ಭಾಗ ಕಲಿಕಾ ನ್ಯೂನತೆಗಳನ್ನು ಕುರಿತದ್ದು. ಕಲಿಕಾ ನ್ಯೂನತೆಯನ್ನು ಆರಂಭದಲ್ಲೇ ಗುರುತಿಸಲು, ಹಾಗೂ ಅವುಗಳಿಗೆ ತಕ್ಕ ಪರಿಹಾರಮಾರ್ಗಗಳ ಬಗ್ಗೆ ಸಲಹೆ-ಸೂಚನೆ ನೀಡಲು ಈ ಪುಸ್ತಕ ರಚಿಸಲ್ಪಟ್ಟಿದೆ. ಇದರಲ್ಲಿ ಕಲಿಕಾ ನ್ಯೂನತೆಯಿಂದ ಬಳಲುತ್ತಿರುವ ಮಕ್ಕಳಿಗೆ ನೀಡಬಹುದಾದ ತರಬೇತಿ ವಿಧಾನಗಳ ಬಗ್ಗೆ ತಿಳಿಸಲಾಗಿದೆ. ಈ ತೊಂದರೆಗಳಿಗೆ ತುತ್ತಾಗುವ ಮಕ್ಕಳು ಸಾಮಾಜಿಕವಾಗಿ, ಮಾನಸಿಕವಾಗಿ ಹಾಗೂ ವ್ಯಕ್ತಿಗತವಾಗಿ ಆತ್ಮವಿಶ್ವಾಸವನ್ನು ಬೆಳೆಸಿಕೊಂಡು ಯಶಸ್ವೀ ಜೀವನ ಸಾಗಿಸುವಂತಾಗಬೇಕೆಂಬುದು ನಮ್ಮ ಆಶಯ. ಈ ದಿಸೆಯಲ್ಲಿ ನಮ್ಮ ಈ ಪುಸ್ತಕವು ಪೋಷಕರಿಗೆ, ಉಪಾಧ್ಯಾಯರಿಗೆ ಉತ್ತಮ ಮಾರ್ಗಸೂಚಿ ಆಗುತ್ತದೆ ಎನ್ನುವುದು ನಮ್ಮ ನಂಬಿಕೆ.

ಈ ಪಠ್ಯಕ್ರಮವನ್ನು ರೂಪಿಸುವಲ್ಲಿ, ಬರೆಯುವಲ್ಲಿ ನಾವೆಷ್ಟು ಸಫಲರಾಗಿದ್ದೇವೆ ಎನ್ನುವುದರ ಬಗ್ಗೆ ನಿಮ್ಮ ಅನಿಸಿಕೆ ನಮಗೆ ಬಹಳ ಅವಶ್ಯ. ದಯವಿಟ್ಟು ಈ ಪಠ್ಯದ ನಿರೂಪಣೆ, ತಾಂತ್ರಿಕತೆ, ಸರಳತೆ, ಸಂಕೀರ್ಣತೆ ಮತ್ತು ನ್ಯೂನತೆಗಳ ಬಗ್ಗೆ ಬರೆದು ತಿಳಿಸಿ. ನಿಮ್ಮ ಅವಶ್ಯಕತೆಗಳನ್ನು ಪೂರೈಸಲು, ನಿಮ್ಮ ಅನಿಸಿಕೆಗಳನ್ನು ಗೌರವಿಸಲು, ನಿಮ್ಮ ಆಶಯಗಳನ್ನು ಮುಟ್ಟಲು ಮುಂದಿನ ಪ್ರಕಟಣೆಗಳಲ್ಲಿ ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ. ನಮ್ಮ ಸಂಸ್ಥೆಯ ಆಸೆ-ಆಕಾಂಕ್ಷೆಗಳನ್ನು ಸಾಕಾರಗೊಳಿಸಲು ನಿಮ್ಮ ಸಹಕಾರ ಅತ್ಯಗತ್ಯ.

ಈ ತರಬೇತಿಯ ಪಠ್ಯ ವಿಷಯಗಳನ್ನು ರೂಪಿಸುವಲ್ಲಿ ವಿಷಯ ತಜ್ಞರು, ವಿಶೇಷ ತಜ್ಞರು ಹಾಗೂ ಸಂಪಾದಕ ಮಂಡಲಿಯ ಸದಸ್ಯರು ಹಗಲಿರುಳು ಶ್ರಮಿಸಿದ್ದಾರೆ. ಯೋಗ್ಯವಾದ ಪಠ್ಯವನ್ನು ರೂಪಿಸುವಲ್ಲಿ ಇವರೆಲ್ಲರೂ ಯಶಸ್ವಿಯಾಗಿದ್ದಾರೆ ಎಂದು ನನ್ನ ಭಾವನೆ. ಇದಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹಾಗೂ ನಮ್ಮ ಸಂಸ್ಥೆಯ ವಿಶೇಷ ಅಭಿನಂದನೆಗಳು.

ಡಾ. ಮ. ಜಯರಾಮ್
ನಿರ್ದೇಶಕರು

# ಪರಿವಿಡಿ

ಅಧ್ಯಾಯ 1............. ಕಲಿಕಾ ನ್ಯೂನತೆಯ ಪರಿಚಯ
ಅಧ್ಯಾಯ 2............. ಕಲಿಕಾ ನ್ಯೂನತೆ ಇರುವ ಮಕ್ಕಳ ವಿವರವಾದ ತಪಾಸಣೆ
ಅಧ್ಯಾಯ 3............. ಕಲಿಕಾ ನ್ಯೂನತೆ ಇರುವ ಮಕ್ಕಳಿಗೆ ನೆರವು
ಅಧ್ಯಾಯ 4............. ಕಲಿಕಾ ನ್ಯೂನತೆ – ಶಾಪವೆ?

# ಅಧ್ಯಾಯ–1

## ಕಲಿಕಾ ನ್ಯೂನತೆಯ ಪರಿಚಯ

ಶಾಲಾ ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳ ಆಧಾರದಲ್ಲಿಯೇ ನಮ್ಮ ಸುತ್ತ ಮುತ್ತಲ ಸಮಾಜ ಮಾತನಾಡುತ್ತಿದೆ. ನಮ್ಮ ಮಗುವನ್ನು ಇನ್ನೊಂದು ಮಗುವಿಗೆ ಹೋಲಿಸಿ ನೋಡುತ್ತೇವೆ. ಕಡಿಮೆ ಅಂಕ ಗಳಿಸಿದರೆಂದರೆ 'ಪೆದ್ದ', 'ದಡ್ಡ' ಎಂಬ ಹಣೆ ಪಟ್ಟಿ ಅಂಟಿಸುತ್ತೇವೆ. ಬೈಯ್ಯುತ್ತೇವೆ, ಕೀಳರಿಮೆಯಿಂದ ನಾವೂ ನರಳುತ್ತೇವೆ, ಮಗುವನ್ನೂ ನರಳಿಸುತ್ತೇವೆ.




ಆದರೆ, ಮಗುವಿನ ನಿಜವಾದ ಸಮಸ್ಯೆಗಳನ್ನು ನಾವು ಯಾರೂ ಅರ್ಥ ಮಾಡಿಕೊಳ್ಳಲು ಯತ್ನಿಸುವುದೇ ಇಲ್ಲ. ಕರ್ಮ ಫಲವೆಂದೋ, ಪಾಪದ ಫಲವೆಂದೋ ನಾವೂ ಅದರಿಂದ ದೂರವಾಗುತ್ತೇವೆ. ಅವರನ್ನು ಏಕಾಂಗಿಗಳಾಗಿಯೇ ಮಾಡಿಬಿಡುತ್ತೇವೆ.

ಪ್ರತಿ 100 ಮಕ್ಕಳಲ್ಲಿ 10 ಮಕ್ಕಳು ಒಂದಲ್ಲ ಒಂದು ರೀತಿಯ ಕಲಿಕಾ ನ್ಯೂನತೆಯಿಂದ ಬಳಲುತ್ತಿದ್ದಾರೆ, ಕೀಳರಿಮೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ, ಸಮೂಹದಿಂದ ಬೇರೆಯೇ ಆಗಿ ಗುರುತಿಸಲ್ಪಡುತ್ತಿದ್ದಾರೆ, ಪೋಷಕರಿಗೆ ತಲೆ ನೋವಾಗುತ್ತಿದ್ದಾರೆ.

ಈ ಸಮಸ್ಯೆಯನ್ನು ಪರಿಹರಿಸಲು ನಾವು ಕಲಿಕಾ ನ್ಯೂನತೆಯ ಬಗ್ಗೆ ಮತ್ತು ಅದರ ಪರಿಹಾರ ಕ್ರಮಗಳ ಬಗ್ಗೆ ತಿಳಿಯಲೇಬೇಕಾಗಿದೆ. ಕರಾಳ ಭವಿಷ್ಯತ್ತನ್ನು ಎದುರಿಸುತ್ತಿರುವ ಈ ರೀತಿಯ ಮಕ್ಕಳ ಬದುಕನ್ನು ನಿರಾಳವಾಗಿಸಲೇಬೇಕಾಗಿದೆ.

ಈ ರೀತಿಯ ಮಗುವು ನಮ್ಮ ಮನೆಯಲ್ಲಿಯೇ ಇರಬಹುದು. ನಮ್ಮ ನೆರೆಹೊರೆಯಲ್ಲಿರಬಹುದು. ನಮ್ಮ ಶಾಲೆಯಲ್ಲಿರಬಹುದು. ಅವರ ಸಮಸ್ಯೆಗಳನ್ನು ಅರಿಯುವ ರೀತಿ, ಪರಿಹಾರವನ್ನು ಸೂಚಿಸುವ ಕ್ರಮ, ಎಲ್ಲವೂ ನಮಗೆ ಸರಿಯಾಗಿ ತಿಳಿದಿರಬೇಕು. ಆ ದೃಷ್ಟಿಯಿಂದ ಮುಂದಿನ ಪುಟಗಳಲ್ಲಿನ ಮಾಹಿತಿಗಳನ್ನು ಅಭ್ಯಾಸ ಮಾಡತೊಡಗುತ್ತೇವೆ. ಮುಂದಿನ ಪುಟಗಳತ್ತ ಸಾಗುತ್ತಾ ಈ ಮಕ್ಕಳ ಸ್ಥಿತಿ ಗತಿಯನ್ನು ಗಮನಿಸುವ.

**"ಗುರಿ ನಮ್ಮದು ಒಂದೇ;**
**ಕಲಿಕಾ ನ್ಯೂನತೆಯ ಮಗುವನ್ನು ತರುವ ಮುಂದೆ"**

ಆನಂದ 9 ವರ್ಷದ ಉತ್ಸಾಹೀ ಬಾಲಕ. ಎಲ್ಲರೊಂದಿಗೆ ಬೆರೆಯುವ ಮಾತುಗಾರ; ಗೆಳೆಯರೆಲ್ಲರಿಗೆ ಅಚ್ಚುಮೆಚ್ಚಿನವ. ಪಾಠ – ಪ್ರವಚನಗಳಲ್ಲಿ ಹಿಂದುಳಿದಿರುವ ಇವನ ಬಗ್ಗೆ ಉಪಾಧ್ಯಾಯರು ಅಸಮಾಧಾನ ವ್ಯಕ್ತಪಡಿಸುತ್ತಾರೆ. ಉಪಾಧ್ಯಾಯರ ಮೆಚ್ಚುಗೆ ಗಳಿಸಲು, ಆನಂದ ಹೆಚ್ಚು ಅಂಕ ಪಡೆಯಲು ಪ್ರಯತ್ನಿಸುತ್ತಾನೆ. ಆದರೆ, ಓದಲು ಕುಳಿತರೆ ಅವನಿಗೆ ಮುಂದುವರಿಯಲು ಆಗುವುದೇ ಇಲ್ಲ. ಹೀಗಾಗಿ ಇತ್ತೀಚೆಗೆ ಓದಿನಿಂದ ದೂರ ಉಳಿಯುವ ಉಪಾಯಗಳನ್ನು ಹುಡುಕುತ್ತಾನೆ. ಏಕೆ?

ಮೂರನೆಯ ತರಗತಿಯಲ್ಲಿ ಓದುತ್ತಿರುವ ನಿತಿನ್, ಆಟೋಟಗಳಲ್ಲಿ ಮುಂದು. ಆದರೆ, ಗಣಿತದ ತರಗತಿ ಎಂದರೆ ನಿರಾಸಕ್ತಿ. ತಂದೆ, ತಾಯಿ ಹಾಗೂ ಗುರುಗಳು ಮಾರ್ಗದರ್ಶನ ನೀಡುತ್ತಿದ್ದರೂ ಅವನು ಗಣಿತದ ಪರೀಕ್ಷೆಯಲ್ಲಿ ಹಿಂದುಳಿಯುತ್ತಾನೆ. ನಿಜವೆ?

5ನೇ ತರಗತಿಯ ವಿದ್ಯಾರ್ಥಿನಿ ಪೂಜಾ ಚಿತ್ರಕಲೆಯಲ್ಲಿ ನಿಪುಣೆ. ತರಗತಿಯ ಇತರರೊಂದಿಗೆ ಬೆರೆಯುವುದು ತೀರಾ ಕಡಿಮೆ. ಗೆಳತಿಯರ ಜೊತೆ ಹರಟೆಯಲ್ಲಿ ಭಾಗವಹಿಸಲೂ ಅವಳಿಂದಾಗದು. ಏಕೆಂದರೆ, ಅವರು ಹೇಳುವ ವಿಷಯಗಳು ಅವಳಿಗೆ ಅರ್ಥವೇ ಆಗಿರುವುದಿಲ್ಲ. ಇದಕ್ಕಾಗಿ ಎಷ್ಟೋ ಸಲ ಅವರ ಅಪಹಾಸ್ಯಕ್ಕೂ ಒಳಗಾಗಿದ್ದಾಳೆ. ಉಪಾಧ್ಯಾಯರ ಪ್ರಶ್ನೆಗಳಿಗೆ ಮೌಖಿಕವಾಗಿ ಉತ್ತರಿಸಲು ತುಂಬಾ ಕಷ್ಟಪಡುತ್ತಾಳೆ. ನಿಧಾನವಾಗಿ ಆಕೆ ಅಂತರ್ಮುಖಿ ಆಗುತ್ತಿದ್ದಾಳೆಯೇ?



ಅಶ್ವಿನ್ ಗಣಿತದ ಸಮಸ್ಯೆ ಬಿಡಿಸುವಲ್ಲಿ ಎತ್ತಿದ ಕೈ; ಇತರ ತರಗತಿಯಲ್ಲೂ ಅಷ್ಟೇ ಜಾಣ. ಗುರುಗಳೂ ಮೆಚ್ಚುತ್ತಾರೆ. ಆಶ್ಚರ್ಯ!! ಈ ಜಾಣ ಬಾಲಕನಿಗೆ ಪರೀಕ್ಷೆಯಲ್ಲಿ ಬರುವ ಅಂಕಗಳು ಮಾತ್ರ ಯಾವಾಗಲೂ ಒಂದಂಕಿಯೇ. ಅವನ ಗುರುಗಳು ಹೇಳುತ್ತಾರೆ, "ಅವನ ಬರವಣಿಗೆ ತೀರಾ ನಿಧಾನ ಹಾಗೂ ಅಕ್ಷರ ಓದಲು ಬಹಳ ಕಷ್ಟ. ಅವನ ಹಾಳೆಗಳನ್ನು ತಿದ್ದುವುದೆಂದರೆ ದೊಡ್ಡ ತಲೆ ನೋವು". ಜಾಣ ಅಶ್ವಿನ್ ಏಕೆ ಹೀಗೆ?




ಮೇಲೆ ಹೇಳಿರುವ ಪ್ರತಿಯೊಂದು ಮಗುವಿಗೂ ಒಂದು ನಿರ್ದಿಷ್ಟ ಸಮಸ್ಯೆ ಇದೆ. ಆದರೆ ಎಲ್ಲರೂ ಕಣ್ಣಿಗೆ ಕಾಣದ, ಇತರರಿಗೆ ಅರ್ಥವಾಗದ ಸಮಸ್ಯೆಗೆ ಸಿಲುಕಿದ್ದಾರೆ. ಒಂದಲ್ಲ ಒಂದು ಶೈಕ್ಷಣಿಕ ವಿಷಯದಲ್ಲಿ ಹಿಂದುಳಿದ ಇವರು, ತಮ್ಮ ಹಿಡಿತಕ್ಕೆ ಮೀರಿದ, ತಮಗೇ ಅರಿವಾಗದ ಸುಳಿಯಲ್ಲಿ ಸಿಲುಕಿದ್ದಾರೆ. ತಿಳಿದುಕೊಳ್ಳಲು ಹೋದವರಿಗೆ ಇವರ ವರ್ತನೆ ಗೋಜಲು ಎನಿಸುತ್ತದೆ. ಸೋಮಾರಿ, ಆಸಕ್ತಿಯೇ ಇಲ್ಲ, ಕಲಿಯಲು ಅಸಡ್ಡೆ–ಹೀಗೆ ಹಲವು ಪಟ್ಟಿಗಳನ್ನು ಹೊತ್ತು ತಮ್ಮದಲ್ಲದ ತಪ್ಪಿಗೆ ಶಿಕ್ಷೆ ಅನುಭವಿಸುವ ಈ ನತದೃಷ್ಟರ ಬಗ್ಗೆ ಸ್ವಲ್ಪ ತಿಳಿದುಕೊಳ್ಳೋಣವೇ? ಈ ರೀತಿಯ ಮಕ್ಕಳಿಗೆ ಕಲಿಕೆ ಒಂದು ಸಮಸ್ಯೆ ಏಕೆ?

' ಕಲಿಕೆ ' ಒಂದು ನೈಸರ್ಗಿಕ ಪ್ರಕ್ರಿಯೆ. ಕಲಿಯುವ ಉತ್ಸಾಹ, ಪ್ರೇರಣೆಗಳು ಮಾನವ ಜೀವಿಗೆ ಪ್ರಕೃತಿದತ್ತವಾಗಿ ಬಂದಿವೆ. ಇದು, ನಾವೆಲ್ಲ ಅಂದುಕೊಂಡಂತೆ ಸರಳವಲ್ಲ. ಸಾಮರ್ಥ್ಯದ ಅರಳುವಿಕೆ ಸರ್ವತಂತ್ರ ಸ್ವತಂತ್ರವಲ್ಲ 'ಕಲಿಕೆ' ಎಂಬ ಈ ನೈಸರ್ಗಿಕ ಸಂಕೀರ್ಣ ಕ್ರಿಯೆಯಲ್ಲಿ ಮಕ್ಕಳು ಹಿಂದುಳಿಯಲು ಕಾರಣಗಳು ಹತ್ತು ಹಲವು. ಅವುಗಳನ್ನು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದು.

## 1) ಮಗುವಿನಲ್ಲಿರುವ ಕಲಿಕಾ ತೊಂದರೆಗಳು:–

■ **ದೈಹಿಕ ತೊಂದರೆಗಳು:–**

ಅ) ಪ್ರತಿಯೊಬ್ಬ ಮಗುವಿಗೆ ತನ್ನ ಬಾಹ್ಯ ಜಗತ್ತಿನೊಡನೆ ಸಂಪರ್ಕ ಬೆಸೆಯುವ ಮತ್ತು ಕಲಿಯಲು ಪೂರಕವಾಗಿರುವ ಇಂದ್ರಿಯಗಳಾದ ಕಣ್ಣು ಅಥವಾ ಕಿವಿಯ ಕಾರ್ಯ ವೈಖರಿಯಲ್ಲಿ ಅಸಮರ್ಪಕತೆ (Sensory Impairment)

ಆ) ಇಂದ್ರಿಯಗಳು ಸರಿಯಾಗಿ ಕಾರ್ಯ ನಿರ್ವಹಿಸಿದರೂ, ಅದನ್ನು ಸರಿಯಾಗಿ ಬಳಸಿಕೊಳ್ಳಲು ಆಗದ ಮಿದುಳು (Intellectual impairment) ಹಾಗೂ,

ಇ) ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳನ್ನು ಕಾಡುವ ಕೆಲವು ನಿರ್ದಿಷ್ಟ ಕಾಯಿಲೆಗಳು.

**ಉದಾ:** ಅಸ್ತಮಾ, ಎಳೆಯ ವಯಸ್ಸಿನಲ್ಲಿಯೇ ಉಂಟಾಗುವ ಮಧುಮೇಹ, ಧನುರ್ವಾತ ಇತ್ಯಾದಿ.

■ **ಮಾನಸಿಕ ತೊಂದರೆಗಳು:–**

ಮನಸ್ಸಿನ ಅಸಮತೋಲನಗಳು : ಉದಾ: ಖಿನ್ನತೆ, ಉದ್ವೇಗ, ಕೀಳರಿಮೆ ಇತ್ಯಾದಿ ಭಾವನಾತ್ಮಕ ಸಮಸ್ಯೆಗಳು.

## 2) ಪರಿಸರದಿಂದುಂಟಾಗುವ ಕಲಿಕಾ ತೊಂದರೆಗಳು

■ **ಮನೆ**

ಮನೆಯ ವಾತಾವರಣ ಸಹಜವಾಗಿರಬೇಕು ಮತ್ತು ಮಗುವಿನ ಕಲಿಕೆಗೆ ಪೂರಕವಾಗಿರಲೇಬೇಕು. ಮನೆಯ ಪರಿಸರದಲ್ಲಿ ಈ ಕೆಳಗಿನ ಕಾರಣಗಳು ಮಗುವಿನ ಕಲಿಕೆಗೆ ತಡೆಯೊಡ್ಡಬಹುದು.

ಅ) ಪೋಷಕರ ಅತೀವ ಕಾಳಜಿ.

ಆ) ಪೋಷಕರ ತೀವ್ರ ಅಸಡ್ಡೆ.

ಇ) ಪೋಷಕರಿಗೆ ಸರಿಯಾದ ಮಾರ್ಗದರ್ಶನದ ಕೊರತೆ.

ಈ) ಮನೆಯ ಸದಸ್ಯರಲ್ಲಿ ಹೊಂದಾಣಿಕೆ ಇಲ್ಲದಿರುವುದು.

■ ಶಾಲೆ

ಮನೆಯ ಪರಿಸರದಷ್ಟೇ ಶಾಲೆಯ ಪರಿಸರವೂ ಕಲಿಕೆಗೆ ಪೂರಕವಾಗಿರಬೇಕು. ಈ ಕೆಳಗೆ ತಿಳಿಸಿರುವ ಕಾರಣಗಳಿಂದ ಕಲಿಕೆಗೆ ತೊಂದರೆಯಾಗುವ ಸಾಧ್ಯತೆ ಇದೆ.

ಅ) ಶಿಕ್ಷಕರು ಪಾಠ ಮಾಡುವ ವಿಧಾನ.

ಆ) ಶಿಕ್ಷಕರ ಬೇಜವಾಬ್ದಾರಿತನ.

ಇ) ಶಾಲೆಯಲ್ಲಿ ಅತೀ ಶಿಸ್ತಿನ ವಾತಾವರಣ

ಈ) ಶಾಲೆಯಲ್ಲಿ ತೀರಾ ಅಶಿಸ್ತಿನ ವಾತಾವರಣ

## ಮೇಲೆ ಗುರುತಿಸಿರುವ ದೋಷಗಳು ಇಲ್ಲ! ಆದರೂ ಕೆಲವು ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುತ್ತಿದ್ದಾರೆ, ಏಕೆ?

ಆಶ್ಚರ್ಯ !! ಮಗುವಿಗೆ ಶ್ರವಣ-ದೃಷ್ಟಿ ದೋಷಗಳೇನೂ ಇಲ್ಲ. ಬುದ್ಧಿ ಶಕ್ತಿ ಚೆನ್ನಾಗಿದೆ. ಮನೆಯ ವಾತಾವರಣವೂ ಪ್ರೋತ್ಸಾಹದಾಯಕವಾಗಿದೆ. ಶಿಕ್ಷಕರೂ ಮುತುವರ್ಜಿ ವಹಿಸಿ ಪಾಠ ಪ್ರವಚನಗಳನ್ನು ಮಾಡುತ್ತಾರೆ. ಮಗುವೂ ಕಲಿಯಲು ಆಸಕ್ತಿ ವಹಿಸುತ್ತಿದೆ. ಆದರೆ, ಮೇಲಿನ (ತರಗತಿಯಿಂದ) ತರಗತಿಗೆ ಮುಂದುವರಿಯುತ್ತಿದ್ದಂತೆಯೇ ಮಗುವಿನ ಶೈಕ್ಷಣಿಕ ಮಟ್ಟ ಕುಸಿಯುತ್ತಿದೆ. ಪೋಷಕರು ಚಿಂತೆಗೀಡಾಗಿದ್ದಾರೆ. "ನನ್ನ ಮುದ್ದು ಕಂದ ಇಷ್ಟು ಚೂಟಿ ಇದ್ದಾನೆ, ಪರೀಕ್ಷೆಯಲ್ಲಿ ಹಿಂದುಳಿಯುತ್ತಾನಲ್ಲಾ"."ಎಂದು ಕೊರಗುತ್ತಾರೆ. ಇದು ಇಂತಹ ಮಕ್ಕಳ ಪೋಷಕರನ್ನು ಹಾಗೂ ಶಿಕ್ಷಕರನ್ನು ಕಾಡುತ್ತಿರುವ ಸಮಸ್ಯೆ. ಈ ಮಕ್ಕಳಿಗೆ ತಮ್ಮ ಸಂಪೂರ್ಣ ಸಾಮರ್ಥ್ಯವನ್ನು ಕಲಿಕೆಯಲ್ಲಿ ತೊಡಗಿಸಲು ಏಕೆ ಆಗುವುದಿಲ್ಲ?

ಪ್ರಪಂಚದಾದ್ಯಂತ ಶೇಕಡಾ ಹತ್ತರಷ್ಟು ಶಾಲಾ ಮಕ್ಕಳನ್ನು ಪೀಡಿಸುತ್ತಿರುವ ಈ ಸಮಸ್ಯೆಗೆ 'ಕಲಿಕಾ ನ್ಯೂನತೆ' ಎನ್ನುತ್ತಾರೆ, ಲರ್ನಿಂಗ್ ಡಿಸೆಬಿಲಿಟಿ (Learning disability) ಅಥವಾ ಡಿಸ್ ಲೆಕ್ಸಿಯಾ (Dis lexia)ಎಂದು ಆಂಗ್ಲ ಭಾಷೆಯಲ್ಲಿ ಕರೆಸಿಕೊಳ್ಳುವ ಈ ನ್ಯೂನತೆಗೆ ಕಾಲ, ದೇಶ, ಭಾಷೆಗಳ ನಿರ್ಬಂಧವಿಲ್ಲ. 4:1 ಪ್ರಮಾಣದಲ್ಲಿ ಗಂಡು ಮಕ್ಕಳಲ್ಲಿ ಇದು ಹೆಚ್ಚಾಗಿ ಕಂಡು ಬರುತ್ತಿರುವ ವರದಿ ಇದೆ.

## ಇಂತಹ ಮಕ್ಕಳಿಗೆ ಸಹಾಯ ಮಾಡಬಹುದೆ?

ಅಮೆರಿಕಾದ ಶ್ರೇಷ್ಠ ವಿಜ್ಞಾನಿ ಥಾಮಸ್ ಆಲ್ವ ಎಡಿಸನ್. ಅವನನ್ನು ಶಾಲೆಯ ಶಿಕ್ಷಕರು ಬುದ್ಧಿಹೀನನೆಂದು ಶಾಲೆಯಿಂದ ಹೊರದೂಡಿದರು. ಆದರೆ, ಸಮಯ ಪ್ರಜ್ಞೆ, ಸಾಹಸ ಪ್ರವೃತ್ತಿಯ ಮಹಿಳೆಯಾದ ಅವನ ಅಮ್ಮ ನ್ಯಾನ್ಸಿ ಎಡಿಸನ್ ತನ್ನ ಮಗನಲ್ಲಿದ್ದ ಸುಪ್ತ ಪ್ರತಿಭೆಯನ್ನು ಗುರುತಿಸಿದ್ದರು. ಮಗನನ್ನು ವಿದ್ಯಾವಂತನನ್ನಾಗಿ ಮಾಡುವ ಜವಾಬ್ದಾರಿಯನ್ನು ತಾವೇ ಸ್ವತ: ಹೊತ್ತರು. ಪ್ರಪಂಚಕ್ಕೆ ಎಡಿಸನ್ ನೀಡಿದ ಎಲ್ಲಾ ಕೊಡುಗೆಗಳೂ ಆ ಮಹಾತಾಯಿ ಕೃಪೆಯಿಂದಲೇ. ವಿಶೇಷ ಎಂದರೆ, ದೊಡ್ಡ ವಿಜ್ಞಾನಿಯಾದರೂ, ಎಡಿಸನ್‌ಗೆ ಓದು ಬರಹದ ಕೆಲವು ಮೂಲ ಕೌಶಲಗಳು ಬರಲೇ ಇಲ್ಲ. ವಾಕ್ಯ ರಚನೆಯಲ್ಲಿ ಮತ್ತು ಬರವಣಿಗೆಯಲ್ಲಿನ ದೋಷಗಳನ್ನು ಕೊನೆಯವರೆಗೂ ಅವರಿಂದ ಸರಿಪಡಿಸಿಕೊಳ್ಳಲಾಗಲಿಲ್ಲ. ಇಂತಪ ಮಕ್ಕಳ ಕಲಿಕಾ ನ್ಯೂನತೆಯ ಪರಿಹಾರ ತಾಯಿಯ ಬಳಿಯಲ್ಲಿಯೇ ಇರುತ್ತದೆ. ಗಮನವಿರಲಿ.

## ಹಾಗಾದರೆ ಕಲಿಕಾ ನ್ಯೂನತೆ ಎಂದರೇನು?

ಕೆಲವು ಮಕ್ಕಳಲ್ಲಿ ಶೈಕ್ಷಣಿಕ ಹಾಗೂ ಶಿಕ್ಷಣೇತರ ತೊಂದರೆಗಳು ಮನೆ ಮಾಡಿರುತ್ತವೆ. ಶೈಕ್ಷಣಿಕ ಸಮಸ್ಯೆ ಎಂದು ಗುರುತಿಸಲ್ಪಡುವ-ಓದುವ, ಬರೆಯುವ ಮತ್ತು ಗಣಿತದ ಸಮಸ್ಯೆಗಳನ್ನು ತಿಳಿದುಕೊಳ್ಳುವ ಸಾಮರ್ಥ್ಯವಿರಬಹುದು;

ಶಿಕ್ಷಣೇತರ ಸಮಸ್ಯೆಗಳಾದ ಭಾಷೆ, ನೆನಪಿನ ಶಕ್ತಿ, ಗ್ರಹಿಕಾ ಸಾಮರ್ಥ್ಯ ಇರಬಹುದು. ಇವುಗಳಲ್ಲಿ ಆಗುವ ತೊಂದರೆಯನ್ನು, **'ಕಲಿಕಾ ನ್ಯೂನತೆ'** ಎನ್ನುತ್ತಾರೆ. ನಮ್ಮ ಮಿದುಳಿನಲ್ಲಿ ಮಾಹಿತಿ ಸಂಗ್ರಹ ಮಾಡುವ ಕೇಂದ್ರಗಳಲ್ಲಿ ನರತಂತುಗಳ ವ್ಯತ್ಯಾಸ, ತೊಂದರೆ, ಮುಂತಾದ ಕಾರಣಗಳಿಂದಾಗಿ ಈ ರೀತಿಯ ಕಲಿಕೆಯಲ್ಲಿನ ತೊಂದರೆ ಕಂಡುಬರುತ್ತದೆ. ಕಲಿಕೆ ಮನುಷ್ಯನ ಮಿದುಳಿನಲ್ಲಿ ಉಂಟಾಗುವ ವಿದ್ಯುತ್, ಜೈವಿಕ ಹಾಗೂ ರಾಸಾಯನಿಕ ಬದಲಾವಣೆಗಳಿಂದ ಆಗುವ ನರತಂತುವಿಗೆ ಸಂಬಂಧಿಸಿದ ಕ್ರಿಯೆ. ಈ ರೀತಿಯ ಮಕ್ಕಳಿಗೆ ಮಾಹಿತಿ ಸಂಗ್ರಹಿಸಿಕೊಳ್ಳುವಲ್ಲಿ ತೊಂದರೆ ಇರುವುದಿಲ್ಲ. ಆದರೆ, ಅವರ ಮಿದುಳಿನ ಕೆಲವು ಕೇಂದ್ರಗಳಲ್ಲಿ ಪಡೆದ ಮಾಹಿತಿಗಳ ಸರಿಯಾದ ವಿಶ್ಲೇಷಣೆ ಅಥವಾ ಹೊಸದಾಗಿ ಪಡೆದ ಮಾಹಿತಿಗೂ ಹಳೆಯ ಶೇಖರಣೆಯಾಗಿರುವ ಮಾಹಿತಿಗೂ ಹೊಂದಾಣಿಕೆಯಾಗದಿದ್ದರೆ ಈ ನ್ಯೂನತೆ ಕಂಡು ಬರುತ್ತದೆ.

### ಈ ನ್ಯೂನತೆಯ ಇತಿಹಾಸವೇನು?

1819 ರಲ್ಲಿ ವೈದ್ಯಕೀಯ ಕ್ಷೇತ್ರದ ಕೆಲವು ತಜ್ಞರು ಕೆಲವು ವ್ಯಕ್ತಿಗಳಲ್ಲಿ ಯೋಚಿಸುವ, ಆಲಿಸುವ, ಮಾತನಾಡುವ, ಓದುವ ಹಾಗೂ ಬರೆಯುವ ತೊಂದರೆ ಇದ್ದುದನ್ನು ಗಮನಿಸಿದರು. ಆದರೆ ಅವರಿಗೆ ಸಿಕ್ಕಿದ ನಿದರ್ಶನಗಳೆಲ್ಲ ಮಿದುಳಿಗೆ ಆಘಾತವಾದ ವಯಸ್ಕರದು. ಇವರಿಗೆ ಯಾವುದೇ ಚಿಕಿತ್ಸೆ ಅಥವಾ ಔಷಧಿ ಫಲಕಾರಿಯಾಗದೇ ಇದ್ದುದರಿಂದ ಇದು ಒಂದು ಶೈಕ್ಷಣಿಕ ಸಮಸ್ಯೆಯಾಗಿ ಗುರುತಿಸಲ್ಪಟ್ಟಿತು. ಹಲವಾರು ರೂಪ ಧರಿಸಿದ ಈ ಸಮಸ್ಯೆ ಒಂದು ಸವಾಲಾಗಿ ಹಲವು ವರ್ಷಗಳ ಕಾಲ ವೈದ್ಯಕೀಯ ಹಾಗೂ ಮನೋವೈಜ್ಞಾನಿಕ ಕ್ಷೇತ್ರದಲ್ಲಿ ಸಂಶೋಧನೆಗೆ ಒಳಪಟ್ಟಿತು.

### ಪದ ಕುರುಡುತನ

1896 ರಲ್ಲಿ ಕಣ್ಣಿನ ತಜ್ಞರೊಬ್ಬರು, ಚಿಕ್ಕ ಹುಡುಗನೊಬ್ಬನಲ್ಲಿ ಈ ಸಮಸ್ಯೆಯನ್ನು ಗುರುತಿಸಿ 'ಪದ ಕುರುಡುತನ' (word blindness) ಎಂದು ಕರೆದರು. ಇದರ ಬಗ್ಗೆ ವೈದ್ಯಕೀಯ ಪತ್ರಿಕೆಗಳಲ್ಲಿ ಲೇಖನ, ಪ್ರಬಂಧಗಳನ್ನು ಬರೆದರು. ಇದೇ ತೊಂದರೆ ಮುಂದೆ ಡಿಸ್ ಲೆಕ್ಸಿಯಾ (ಡಿಸ್=ತೊಂದರೆ ಲೆಕ್ಸಿಯಾ=ಪದ) ಎಂಬ ಹೊಸ ಗ್ರೀಕ್ ಪದದ ಬಳಕೆಗೆ ನಾಂದಿಯಾಯಿತು. 1962 ರಲ್ಲಿ ಅಮೆರಿಕಾ ದೇಶದಲ್ಲಿ ಇಂತಹ ಮಕ್ಕಳ ಪೋಷಕರ ಸಂಸ್ಥೆಯೊಂದು ಸ್ಥಾಪನೆಯಾಯಿತು. ಇಂತಹ ಮಕ್ಕಳ ಶೈಕ್ಷಣಿಕ ಅಗತ್ಯಗಳನ್ನು ಎತ್ತಿ ಹಿಡಿಯಲು 'ಲರ್ನಿಂಗ್ ಡಿಸೆಬಿಲಿಟಿ' (ಕಲಿಕಾ ನ್ಯೂನತೆ) ಎಂದು ನಾಮಾಂಕಿತಗೊಂಡಿತು.

### ಕಲಿಕಾ ನ್ಯೂನತೆಯ ವಿಶಿಷ್ಟ ಗುಣಲಕ್ಷಣಗಳೇನು?

1) ಇದೊಂದು ಹೊರ ನೋಟಕ್ಕೆ ಗೋಚರಿಸದ ಆಂತರಿಕ ನ್ಯೂನತೆ.
2) ಸಾಮಾನ್ಯ ಮಟ್ಟ ಅಥವಾ ಸಾಮಾನ್ಯ ಮಟ್ಟಕ್ಕಿಂತ ಹೆಚ್ಚು ಬುದ್ಧಿ ಶಕ್ತಿ ಇದ್ದರೂ ಓದು, ಬರಹ, ಗಣಿತದಲ್ಲಿ ಹಿಂದುಳಿಯುತ್ತಾರೆ.
3) ಶೈಕ್ಷಣಿಕ ಮಟ್ಟವನ್ನು ಸರಿದೂಗಿಸಿಕೊಂಡು ಹೋಗುವ ನಿಟ್ಟಿನಲ್ಲಿ ಇವರು ಎಷ್ಟೇ ಶ್ರಮವಹಿಸಿದರೂ ಅವರಿಗೆ ಅದು ಸಾಧ್ಯವಾಗುವುದಿಲ್ಲ.
4) ಯೋಚಿಸುವ ಹಾಗೂ ವಿಶ್ಲೇಷಿಸುವ ಸಾಮರ್ಥ್ಯವು ಈ ಮಕ್ಕಳಲ್ಲಿ ಕುಂಠಿತಗೊಂಡಿರುತ್ತದೆ.
5) ಕೆಲವು ವಿಷಯಗಳಲ್ಲಿ ಮುಂದಿದ್ದರೆ, ಕೆಲವು ವಿಷಯಗಳಲ್ಲಿ ಮುಗ್ಗರಿಸುತ್ತಾರೆ.
6) ಈಗ ತಾನೇ ಸರಿಯಾಗಿ ಮಾಡಿದ್ದನ್ನು ಮತ್ತೊಮ್ಮೆ ಹಾಗೇಯೇ ಮಾಡುತ್ತಾರೆ ಎಂದು ಹೇಳುವಂತಿಲ್ಲ. ಈ ಎಲ್ಲ ಲಕ್ಷಣಗಳನ್ನೊಳಗೊಂಡಿರುವ ಈ ಸಮಸ್ಯೆ ಮಕ್ಕಳನ್ನು ತೀವ್ರ ಹತಾಶೆಗೆ ತಳ್ಳುತ್ತದೆ.



**ಕಲಿಕಾ ನ್ಯೂನತೆಯ ಮಕ್ಕಳು ಎದುರಿಸುವ ನಿರ್ದಿಷ್ಟ ಸಮಸ್ಯೆಗಳು**

ಕಲಿಕಾ ನ್ಯೂನತೆ ಇರುವ ಒಬ್ಬೊಬ್ಬ ಮಗುವಿನ ಸಮಸ್ಯೆಗಳೂ ಬೇರೆ ಬೇರೆಯೇ ಆಗಿರುತ್ತವೆ. ನೂರು ಮಕ್ಕಳು ಇರುವ ಶಾಲೆಯಲ್ಲಿ ಹತ್ತು ಮಕ್ಕಳಿಗೆ ಈ ಸಮಸ್ಯೆ ಇದ್ದರೆ, ಪ್ರತಿಯೊಬ್ಬರ ಸಮಸ್ಯೆಯೂ ವಿಭಿನ್ನವಾಗಿರುತ್ತದೆ. ಪರಸ್ಪರ ಹೋಲಿಸಲು ಸಾಧ್ಯವಿರುವುದಿಲ್ಲ. ಒಂದು ಮಗುವಿಗೆ ಓದುವ ಸಮಸ್ಯೆ ಇದೆ ಎಂದಾದರೆ, ಅದರ ರೂಪುರೇಷೆಗಳನ್ನು ಗುರುತಿಸಬೇಕು. ಅಕ್ಷರಗಳನ್ನು ಗುರುತಿಸುವಲ್ಲಿ ಸಮಸ್ಯೆ ಇದೆಯೇ? ಅಕ್ಷರಗಳನ್ನು ಜೋಡಿಸಲು ಮಗುವಿಗೆ ಸಮಸ್ಯೆಯೇ? ವಾಕ್ಯ ಜೋಡಿಸಲು ಸಮಸ್ಯೆಯೇ? ಓದಿದ ಪದದ/ವಾಕ್ಯದ ಅರ್ಥ ತಿಳಿಯದೇ? ಹೊರ ಅರ್ಥ ತಿಳಿಯುತ್ತದೆ. ಆದರೆ ಒಳ ಅರ್ಥ ತಿಳಿಯಲು ಸಮಸ್ಯೆಯೇ?

ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ವಿಶೇಷವೆಂದರೆ ಓದಲು ಮತ್ತು ಬರೆಯಲು ಬರದೇ ಇರುವವರ ರೂಪುರೇಷೆಗಳು ಎಲ್ಲಾ ಒಂದೇ ಮಗುವಿನಲ್ಲಿ ಕಂಡು ಬರುವುದು ಅಪರೂಪ. ಹೀಗಾಗಿ ಒಬ್ಬೊಬ್ಬರಲ್ಲಿ ಕಂಡು ಬರುವ ಸಮಸ್ಯೆಯೂ ವಿಶಿಷ್ಟವೇ.

**ಭಾಷಾ ಬೆಳವಣಿಗೆಯ ತೊಂದರೆಗಳು ಯಾವುವು?**

ಆ) ಶಬ್ದೋಚ್ಚಾರಣೆಯ ತೊಂದರೆಗಳು.

ಅ) ಭಾಷಾ ಗ್ರಹಿಕೆಯಲ್ಲಿ ತೊಂದರೆಗಳು

ಇ) ಭಾಷಾ ಅಭಿವ್ಯಕ್ತಿಯಲ್ಲಿ ತೊಂದರೆಗಳು

ಇದು ಭಾಷೆಯನ್ನು ಕೇಳಿ, ಅರ್ಥಮಾಡಿಕೊಂಡು ಸರಿಯಾದ ರೀತಿಯಲ್ಲಿ ಮಾತನಾಡಲು ಆಗದೆ ಇರುವಂತಹ ಒಂದು ತೊಂದರೆ. ಕೆಲವರಿಗೆ ಶಬ್ದದ ಉಚ್ಚಾರಣೆ ಕಷ್ಟವಾಗಬಹುದು, ಅಥವಾ ಶ್ರವಣ ದೋಷ ಇಲ್ಲದಿದ್ದರೂ ಕೇಳಿಸಿಕೊಳ್ಳುವುದರಲ್ಲಿ ಎಡವಟ್ಟಾಗಬಹುದು. ಅಥವಾ ಶಬ್ದಗಳನ್ನು ಅರ್ಥ ಮಾಡಿಕೊಂಡಿದ್ದರೂ ಸಹ, ಬೇಕೆಂದಾಗ ತಮಗೆ ಅದನ್ನು ಹೇಳಲು ತೊಂದರೆಯಾಗಬಹುದು. ಕೆಲವು ಮಕ್ಕಳಿಗೆ ಸರಿಯಾಗಿ ವ್ಯಾಕರಣಬದ್ಧವಾಗಿ ಮಾತನಾಡಲು ಆಗುವುದಿಲ್ಲ. ಮತ್ತೆ ಕೆಲವರಿಗೆ ಪ್ರತ್ಯಯಗಳ ಬಳಕೆ, ಲಿಂಗ, ಕಾಲ, ವಚನಗಳನ್ನು ವಾಕ್ಯದಲ್ಲಿ ಅಳವಡಿಸುವುದು ಕಷ್ಟವೆನಿಸುತ್ತದೆ. ಕೆಲವರಿಗೆ ಅ–ಹ; ಸ–ಶ; ಣ–ನ; ಳ–ಲ ಅಕ್ಷರಗಳ ವ್ಯತ್ಯಾಸ ಗುರುತಿಸಲು ಆಗುವುದಿಲ್ಲ. 'ಆಡು' ಎಂದು ಹೇಳುವಲ್ಲಿ 'ಹಾಡು' ಎಂದರೆ ವಾಕ್ಯದ ಅರ್ಥವೇ ಬದಲಾಗುತ್ತಿದೆ.

## ಓದಲು ಕಲಿಯುವ ಹಂತದಲ್ಲಿ ದೋಷಗಳು



1) ಅಕ್ಷರ ಗುರುತಿಸಲು ಆಗದೆ ಇರುವುದು.
2) ಅಕ್ಷರಗಳನ್ನು ಹೊಂದಿಸಿ ಪದ ರಚಿಸಿಕೊಳ್ಳುವುದು.
3) ಪದಗಳನ್ನು ಸರಿಯಾದ ಕ್ರಮದಲ್ಲಿ ಜೋಡಿಸಿಕೊಂಡು ವಾಕ್ಯಗಳನ್ನು ಓದುವುದಕ್ಕೆ ಆಗುವುದಿಲ್ಲ.
4) ಓದಿದ್ದನ್ನು ಅರ್ಥ ಮಾಡಿಕೊಳ್ಳಲು ಕಷ್ಟ.



## ಬರವಣಿಗೆ ಕಲಿಯುವ ಹಂತದಲ್ಲಿ ತೊಂದರೆ:

1) ಬೇರೆಯವರಿಗೆ ಓದಲು ಕಷ್ಟವೆನಿಸುವಷ್ಟು ಕೆಟ್ಟ ಕೈಬರಹ.
2) ಕಾಗುಣಿತ ದೋಷಗಳು.
3) ಉಕ್ತಲೇಖನ–ಕೇಳಿದ ಶಬ್ದದ ಆಧಾರದ ಮೇಲೆ ಅಕ್ಷರವನ್ನು ಕಲ್ಪಿಸಿಕೊಂಡು, ಕೈಯ ಚಲನೆಯ ಮೂಲಕ ಬರೆಯುವುದು.
4) ಕಪ್ಪು ಹಲಗೆ ಮತ್ತು ಬೇರೆ ಪುಸ್ತಕದಿಂದ ನೋಡಿ ಬರೆಯಲು ಕಷ್ಟ.
5) ಸ್ವತಃ ಊಹಿಸಿಕೊಂಡು ಬರೆಯುವುದರಲ್ಲಿ ತೊಂದರೆ.

## ಗಣಿತದ ತೊಂದರೆ

1) ಸಂಖ್ಯಾ ಜ್ಞಾನದಲ್ಲಿ ವ್ಯತ್ಯಾಸಗಳು.
2) ಗಣಿತದ ಮೂಲ ಪ್ರಕ್ರಿಯೆಗಳನ್ನು (ಕೂಡಿಸುವುದು, ಕಳೆಯುವುದು ಇತ್ಯಾದಿ) ತಿಳಿದುಕೊಳ್ಳುವುದರಲ್ಲಿ ತೊಂದರೆ.
3) ಗಣಿತದ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ತೊಂದರೆ.
4) ಗಣಿತದ ಭಾಷೆಯನ್ನು ಅರ್ಥೈಸಿಕೊಳ್ಳುವುದರಲ್ಲಿ ತೊಂದರೆ.
5) ಭಾಷೆಯಿಂದ ಸಂಖ್ಯೆಗೆ ವರ್ಗಾಯಿಸುವುದರಲ್ಲಿ ತೊಂದರೆ.

– ಹೀಗೆ ಹಲವಾರು ಸಮಸ್ಯೆಗಳಿಂದ ಗಣಿತದ ಕಲಿಕೆಯಲ್ಲಿ ತೊಂದರೆಗಳು ಕಾಣಬರುತ್ತವೆ.




## ಶಿಕ್ಷಣೇತರ ಕ್ಷೇತ್ರಗಳಲ್ಲಿ ಮಕ್ಕಳು ಅನುಭವಿಸುವ ತೊಂದರೆಗಳು

ಕಲಿಕಾ ನ್ಯೂನತೆಯ ಪ್ರಮುಖ ಲಕ್ಷಣಗಳು, ಶೈಕ್ಷಣಿಕ ಸಾಧನೆಯ ಮಟ್ಟದಲ್ಲಿ ಗೋಚರಿಸುತ್ತದೆ ಎಂದಲ್ಲ. ಅವರು ಇನ್ನೂ ಅನೇಕ ರೀತಿಯ ತೊಂದರೆಗಳಿಗೆ, ಈಡಾಗಬೇಕಾಗುತ್ತದೆ. ಇವೆಲ್ಲ ದೋಷಗಳು ಒಂದು ಮಗುವಿನಲ್ಲೂ ಬೇರೆಯಾಗಿ ಈ ಕೆಳಕಂಡ ಶಿಕ್ಷಣೇತರ ಕ್ಷೇತ್ರಗಳಲ್ಲಿ ಕಂಡು ಬರುತ್ತವೆ.

1) ಸಾಮಾಜಿಕ ನಡೆನುಡಿ

2) ಭಾವನಾತ್ಮಕ ಪಕ್ವತೆ

3) ಗಮನ ಕೇಂದ್ರೀಕರಣ

4) ಚಟುವಟಿಕೆಯ ಮಟ್ಟ

5) ಚಲನಾ ಕೌಶಲ ಮತ್ತು ಸಾಮರ್ಥ್ಯ

• ಕಲಿಕಾ ನ್ಯೂನತೆಯುಳ್ಳ ಮಕ್ಕಳು ಇಂತಹ ಹಲವಾರು ತೊಂದರೆಗಳನ್ನು ಒಟ್ಟೊಟ್ಟಿಗೆ ಅನುಭವಿಸುವ ಸಾಧ್ಯತೆ ಇದೆ. ಕಲಿಕಾ ನ್ಯೂನತೆಯಿರುವ ಗಮನಾರ್ಹ ಸಂಖ್ಯೆಯ ಮಕ್ಕಳು ಭಾವನಾತ್ಮಕ ಹಾಗೂ ವರ್ತನಾ ಸಮಸ್ಯೆಯನ್ನು ಹೊಂದಿರುತ್ತಾರೆ. ಇಂತಹ ಮಕ್ಕಳಿಗೆ ಸಕಾಲದಲ್ಲಿ ಸೂಕ್ತ ಪರಿಹಾರ ಕ್ರಮಗಳನ್ನು ಒದಗಿಸುವುದು ಅತ್ಯವಶ್ಯಕ.

### ಈ ರೀತಿಯ ಸಮಸ್ಯೆಗಳಿಗೆ ಏನು ಕಾರಣ?

ನಮಗೆ ಯಾವುದೇ ರೀತಿಯ ಕಾಯಿಲೆ ಅಥವಾ ತೊಂದರೆಯಾದಾಗ ಸ್ವಾಭಾವಿಕವಾಗಿ ನಮ್ಮ ಮನಸ್ಸಿನಲ್ಲಿ ಉದ್ಭವಿಸುವ ಪ್ರಶ್ನೆ ಇದು. ಕಾರಣ ತಿಳಿದರೆ ಪರಿಹಾರ ಸುಲಭ. ಆದರೆ, ಈ ತೊಂದರೆಗೆ ನಿಖರವಾದ ಕಾರಣ ಇನ್ನೂ ತಿಳಿದಿಲ್ಲ. ಹಲವಾರು ಕ್ಷೇತ್ರದ ಗಣ್ಯರ ಸಂಶೋಧನೆಗಳಿಂದ ತಿಳಿದು ಬಂದಿರುವಂತೆ ಹಲವಾರು ಕಾರಣಗಳ ಪಟ್ಟಿ ಮಾಡಬಹುದಾದರೂ ಮಗುವಿನಲ್ಲಿ ಈ ಸಮಸ್ಯೆಗೆ ಇದೇ ಕಾರಣ ಎನ್ನಬಹುದಾದ ನಿಖರತೆ ಇಲ್ಲಿ ಸಾಧ್ಯವಿಲ್ಲ. ಅಲ್ಲದೆ ಕಾರಣ ಹುಡುಕುವುದು ಈ ಸಮಸ್ಯೆಗೆ ಪರಿಹಾರವೂ ಅಲ್ಲ. ಆದ್ದರಿಂದ ಕಾರಣಗಳ ಬಗ್ಗೆ ಯೋಚಿಸುವ ಬದಲು ಪರಿಹಾರದ ಬಗ್ಗೆ ಯೋಚಿಸುವುದೇ ಇಲ್ಲಿ ಹೆಚ್ಚು ಸಮಂಜಸ. ಆದರೂ ಈ ಕೆಳಗಿನ ಕಾರಣಗಳಿಂದ ನ್ಯೂನತೆ ತಲೆದೋರಬಹುದು ಎಂದು ಹೇಳಬಹುದು.

1) **ಆನುವಂಶೀಯತೆ:-** ತಂದೆ – ತಾಯಿ, ಒಡಹುಟ್ಟಿದವರಲ್ಲಿ ಈ ಸಮಸ್ಯೆ ಇದ್ದರೆ, ಇದು ಮಕ್ಕಳಿಗೆ ಬರುವ ಸಾಧ್ಯತೆ ಹೆಚ್ಚು ಎನ್ನಬಹುದು.

2) **ಗರ್ಭಾವಸ್ಥೆಯಲ್ಲಿ ಆಗುವ ಏರುಪೇರು:-** ತಾಯಿ ಗರ್ಭಿಣಿಯಾಗಿದ್ದಾಗ ಯಾವುದೇ ಕಾಯಿಲೆ ಬಂದಿದ್ದರೆ ಮತ್ತು ಕಾಯಿಲೆಗೆ ತೆಗೆದುಕೊಂಡ ಔಷಧಿಯಿಂದ ಈ ಸಮಸ್ಯೆ ಬರಬಹುದು. ಹಾಗೆಯೇ ತಾಯಿಯಲ್ಲಿ ಪೌಷ್ಟಿಕಾಂಶದ ಕೊರತೆ, ರಕ್ತ ಹೀನತೆ, ಮದ್ಯಪಾನ, ತಂಬಾಕಿನ ಚಟ ಇವುಗಳು ಕೂಡ ಹುಟ್ಟುವ ಮಕ್ಕಳಲ್ಲಿ ಕಲಿಕಾ ನ್ಯೂನತೆಯನ್ನು ಉಂಟು ಮಾಡಬಹುದು.



3) **ಪ್ರಸವ ವೇಳೆಯಲ್ಲಿ ಆಗುವ ಏರುಪೇರು:-** ಪ್ರಸವ ವೇಳೆಯಲ್ಲಿ ಮಗುವಿಗೆ ಏನಾದರೂ ಸೂಕ್ಷ್ಮ ಪೆಟ್ಟಾದರೆ, ಹುಟ್ಟಿದ ತಕ್ಷಣ ಮಗು ಅಳದೇ ಇದ್ದರೆ, ತೂಕ ತೀರಾ ಕಡಿಮೆ ಇದ್ದರೂ ಸಹ ಮಕ್ಕಳು ಬೆಳೆಯುತ್ತಾ ಹೋದಂತೆ ಈ ಸಮಸ್ಯೆ ಕಾಣಬಹುದು.

**4) ಹುಟ್ಟಿದ ನಂತರ:–** ಹುಟ್ಟಿದಂದಿನಿಂದ ಎರಡು ವರ್ಷಗಳವರೆಗೆ ಮಗುವಿನ ಮಿದುಳಿನ ಬೆಳವಣಿಗೆ ಅತ್ಯಂತ ವೇಗವಾಗಿ ನಡೆಯುತ್ತದೆ. ಈ ವೇಳೆಯಲ್ಲಿ ಮಗುವಿಗೆ ಉತ್ತಮ ಪೌಷ್ಟಿಕ ಆಹಾರದ ಕೊರತೆಯಾದರೆ ಅಥವಾ ತಲೆಗೆ ಪೆಟ್ಟು ಬಿದ್ದರೆ, ವೈರಸ್ ಸೋಂಕು ತಗುಲಿದರೆ, ವಿಷಯುಕ್ತ ವಾತಾವರಣದಲ್ಲಿ ಮಗುವು ಬೆಳೆಯುವ ಅನಿವಾರ್ಯತೆ ಇದ್ದರೆ, ಬೆಳೆಯುತ್ತಾ ಹೋದಂತೆ ಮಗುವು ಕಲಿಕಾ ನ್ಯೂನತೆಯಿಂದ ತೊಂದರೆ ಅನುಭವಿಸಬಹುದು.

## ಸ್ವ – ಅಧ್ಯಯನಕ್ಕೆ ಪ್ರಶ್ನೆಗಳು

1) ಕಲಿಕೆ ಎಂದರೇನು?
2) ಕಲಿಕಾ ನ್ಯೂನತೆ ಅಂದರೇನು?
3) ಶಾಲಾ ಮಕ್ಕಳು ಕಲಿಕೆಯಲ್ಲಿ ಹಿಂದುಳಿಯಲು ಕಾರಣಗಳೇನು?
4) ಕಲಿಕೆಗೆ ಅಡ್ಡಿಯುಂಟುಮಾಡುವ ದೈಹಿಕ ತೊಂದರೆಗಳಾವುವು?
5) ಕಲಿಕೆಗೆ ಅಡ್ಡಿಯುಂಟು ಮಾಡುವ ಮಾನಸಿಕ ತೊಂದರೆಗಳಾವುವು?
6) ಕಲಿಕೆಗೆ ಪೂರಕ ವಾತಾವರಣವು ಸೃಷ್ಟಿಸುವಲ್ಲಿ ಮನೆಯ ಪಾತ್ರವೇನು?
7) ಶಾಲೆಯ ವಾತಾವರಣವು ಕಲಿಕೆಗೆ ಹೇಗೆ ತಡೆಯೊಡ್ಡುತ್ತದೆ?
8) ಮೇಲ್ನೋಟಕ್ಕೆ ಗೋಚರಿಸುವ ಯಾವುದೇ ತೊಂದರೆಯಿಲ್ಲದಿದ್ದರೂ ಮಗುವು ಕಲಿಯುವುದರಲ್ಲಿ ಹಿಂದುಳಿಯಲು ಸಾಧ್ಯವೇ? ಹೇಗೆ?
9) ಕಲಿಕಾ ನ್ಯೂನತೆಯ ಇತಿಹಾಸವೇನು?
10) ಇದರ ವಿಶಿಷ್ಟ ಗುಣಲಕ್ಷಣಗಳೇನು?
11) ಭಾಷೆಯನ್ನು ಕಲಿಯುವಲ್ಲಿ ಇವರು ಯಾವ ರೀತಿಯ ಕಷ್ಟಗಳನ್ನು ಎದುರಿಸುತ್ತಾರೆ?
12) ಓದಲು ಕಲಿಯುವಾಗ ಇವರಿಗಾಗುವ ತೊಂದರೆಗಳಾವುವು?
13) ಬರವಣಿಗೆಯನ್ನು ಕರಗತಗೊಳಿಸಿಕೊಳ್ಳಲು ಇವರಿಗಿರುವ ಅಡ್ಡಿ ಆತಂಕಗಳೇನು?
14) ಗಣಿತದ ಸಮಸ್ಯೆ ಬಿಡಿಸಲು ಇವರಿಗೇಕೆ ತೊಂದರೆಯುಂಟಾಗುವುದು?
15) ಶಿಕ್ಷಣೇತರ ಕ್ಷೇತ್ರಗಳಲ್ಲಿ ಇವರು ಅನುಭವಿಸುವ ಅಡ್ಡಿ ಆತಂಕಗಳು ಯಾವುವು?
16) ಈ ವಿಶಿಷ್ಟ ಸಮಸ್ಯೆಗೆ ಕಾರಣಗಳೇನು?
17) ಕಲಿಕೆಯ ನ್ಯೂನತೆಯಲ್ಲಿನ ರೂಪುರೇಷೆಗಳನ್ನು ವಿವರವಾಗಿ ತಿಳಿಸಿ.

# ಅಧ್ಯಾಯ – 2

# ಕಲಿಕಾ ನ್ಯೂನತೆಯಿರುವ ಮಕ್ಕಳ ವಿವರವಾದ ತಪಾಸಣೆ

ಹಿಂದಿನ ಅಧ್ಯಾಯದಲ್ಲಿ ನಿಮಗೆ ಕಲಿಕಾ ನ್ಯೂನತೆಯ ಬಗ್ಗೆ ಸಿಕ್ಕಿದ ಮಾಹಿತಿಗಳು ಅದರ ಬಗೆಗಿನ ಸ್ಪಷ್ಟ ಕಲ್ಪನೆ ಮೂಡಿಸಿವೆ ಎಂದು ಅನ್ನಿಸುತ್ತದೆ. ಮೇಲ್ನೋಟಕ್ಕೆ ಇಂತಹ ಮಕ್ಕಳನ್ನು ನಾನು ಗುರುತಿಸಬಲ್ಲೆ ಎಂಬ ವಿಶ್ವಾಸ ಮೂಡಿಸಿರಬಹುದು. ಆದರೆ, ಕೆಲವೊಂದು ಸಂದರ್ಭಗಳಲ್ಲಿ ಗುರುತಿಸುವಿಕೆ ಕಷ್ಟ ಎನಿಸಬಹುದು. ಮೊದಲನೆಯ ಹಂತದಲ್ಲಿ ತಜ್ಞರ ಸಹಾಯವಿಲ್ಲದೆ ನೀವೇ ಗುರುತಿಸಬೇಕಾಗುತ್ತದೆ. ಸಮಸ್ಯೆ ಗಂಭೀರವಾಗುವ ಮೊದಲೇ ಎಚ್ಚತ್ತುಕೊಂಡು ಸಹಾಯ/ತರಬೇತಿ ನೀಡಿದರೆ ಉತ್ತಮ. ಏಕೆಂದರೆ ಕಲಿಕಾ ನ್ಯೂನತೆ, ವಿವರಿಸಲು ಸಾಧ್ಯವಾಗದ ಒಂದು ಸಂಕೀರ್ಣ ನ್ಯೂನತೆ. ಆದ್ದರಿಂದಲೇ ನ್ಯೂನತೆ ಇರುವವರನ್ನು ನೇರವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಅಲ್ಲದೆ ಬೇರೆ ಹಲವಾರು ಕಾರಣಗಳಿಂದ ಶೈಕ್ಷಣಿಕವಾಗಿ ಹಿಂದುಳಿದಿರುವ ಮಕ್ಕಳೂ ಇರುತ್ತಾರೆ. ಕಲಿಕಾ ನ್ಯೂನತೆಯುಳ್ಳ ಮಕ್ಕಳನ್ನು ಇವರಿಂದ ಬೇರ್ಪಡಿಸುವ ಸಾಮರ್ಥ್ಯವೂ ನಿಮಗಿರಬೇಕು. ಪರೀಕ್ಷೆಯಲ್ಲಿ ಅಂಕಗಳು ಬರುವುದಿಲ್ಲ ಎಂಬ ಒಂದೇ ಕಾರಣಕ್ಕಾಗಿ ಮಗು ಕಲಿಕಾ ನ್ಯೂನತೆಯಿಂದ ಬಳಲುತ್ತಿದೆ ಎಂದು ಅಂದುಕೊಳ್ಳಬಾರದು.

## ಮಗುವಿನಲ್ಲಿ ಕಲಿಕಾ ನ್ಯೂನತೆ ಇದೆಯೇ ಎಂದು ಮೊದಲಿಗೆ ಹೇಗೆ ಊಹಿಸಬಹುದು?

ಮಗುವು ನೀವು ಅಂದುಕೊಂಡಂತೆ ತರಗತಿಯಲ್ಲಿ ಮುಂದುವರಿಯದಿರುವಾಗ ಮಗುವಿನ ಸಮಸ್ಯೆ ಏನು ಎಂದು ನಿಮಗೆ ಚಿಂತೆಯಾಗಿರುತ್ತದೆ. ಹಾಗಾದರೆ ನಮಗೆ ನಾವೇ ಈ ಪ್ರಶ್ನೆಗಳನ್ನು ಹಾಕಿಕೊಳ್ಳೋಣ:

**ಪ್ರಶ್ನಾ ಸರಣಿ:**

1) ಮಗುವಿಗೆ ಕಿವಿ ಸರಿಯಾಗಿ ಕೇಳಿಸುತ್ತಿದೆಯೇ?
2) ಮಗುವಿಗೆ ಕಣ್ಣು ಸರಿಯಾಗಿ ಕಾಣಿಸುತ್ತಿದೆಯೆ?
3) ಅದರ ವಯಸ್ಸಿನ ಇತರ ಮಕ್ಕಳೊಂದಿಗೆ ಹೋಲಿಸಿದರೆ, ನಿಮ್ಮ ಮಗುವು ಅದೇ ರೀತಿಯ ಚಟುವಟಿಕೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತಿದೆಯೇ?
4) ದೈನಂದಿನ ಪಾಠ ಪ್ರವಚನಗಳ ಕಡೆ ಮನೆಯಲ್ಲಿ ಗಮನ ಕೊಡುತ್ತಿದೆಯೇ?
5) ನೀವು ಹೇಳುವ ವಾಕ್ಯಗಳನ್ನು ಅರ್ಥಮಾಡಿಕೊಂಡು ಅದರಂತೆ ಮಾಡುತ್ತಿದೆಯೇ?

ಈ ಎಲ್ಲಾ ಪ್ರಶ್ನೆಗಳಿಗೆ ನಿಮ್ಮ ಉತ್ತರ ' ಹೌದು ' ಎಂದಾದರೆ, ಮುಂದುವರಿದು ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರಿಸೋಣ:

## ಹೊಸ ಪ್ರಶ್ನೆಗಳು

1) ತೀವ್ರ ತರದ ಭಾವನಾತ್ಮಕ ತೊಂದರೆಯಿಂದ ಮಗುವು ಬಳಲುತ್ತಿದೆಯೆ? (ಆತಂಕ, ಖಿನ್ನತೆ ಇತ್ಯಾದಿ)
2) ಮಗುವಿನ ವರ್ತನೆಯಲ್ಲಿ ಏನಾದರೂ ಏರುಪೇರು ಇದೆಯೆ?
3) ಮಗುವಿನ ಕುಟುಂಬದ ಸದಸ್ಯರಲ್ಲಿ ಪದೇ ಪದೇ ಕಲಹ ಆಗುತ್ತದೆಯೇ?
4) ಮಗುವು ಯಾವುದಾದರೂ ತೀವ್ರ ತರಹದ ದೈಹಿಕ ತೊಂದರೆಯಿಂದ ಬಳಲುತ್ತಿದೆಯೇ?
5) ಶಾಲೆಯಲ್ಲಿ ಉಪಾಧ್ಯಾಯರು/ ಸಹ ವಿದ್ಯಾರ್ಥಿಗಳು ಮಗುವನ್ನು ಹಿಯಾಳಿಸುತ್ತಾರೆಯೇ?

ಮೇಲಿನ ಐದೂ ಪ್ರಶ್ನೆಗಳಿಗೆ ಉತ್ತರ 'ಇಲ್ಲ' ಎಂದಾದರೆ, ನಿಮ್ಮ ಮಗುವಿಗೆ ಕಲಿಕೆಯ ನ್ಯೂನತೆ ಇರುವ ಸಂಭವ ಇದೆ.

## ಮೇಲಿನ ಪ್ರಶ್ನೆಗಳಿಗೆ ಉತ್ತರಿಸಬೇಕಾದಾಗ ಗಮನಿಸಬೇಕಾದ ಅಂಶಗಳು

1) ಈ ಪ್ರಶ್ನೆಗಳಿಗೆ ಉತ್ತರಿಸಲು ಸರಿಯಾದ ಮಾಹಿತಿಯನ್ನು ಸಂಗ್ರಹಿಸುವುದು ಅಗತ್ಯ.
2) ವಿವಿಧ ಸಂದರ್ಭಗಳಲ್ಲಿ ಮಗುವನ್ನು ಗಮನಿಸಿ.
3) ಅನೌಪಚಾರಿಕ ಪ್ರಶ್ನೆಗಳ ಮೂಲಕ ಮಾಹಿತಿ ಕಲೆ ಹಾಕಿ.
4) ನೀವು ಮಾಹಿತಿ ಸಂಗ್ರಹಣೆಗಾಗಿ ಗಮನಿಸುತ್ತೀರಿ/ಅಥವಾ ಪ್ರಶ್ನೆ ಕೇಳುತ್ತಿದ್ದೀರಿ ಎಂದು ಮಗುವಿಗೆ ಅರಿವಾಗಬಾರದು.
5) ಮಗುವಿನ ವರ್ತನೆಯ ಬಗ್ಗೆ ಅವನ ಕುಟುಂಬದ ಇತರ ಸದಸ್ಯರೊಂದಿಗೆ ಹಾಗೂ ಶಾಲಾ ಉಪಾಧ್ಯಾಯರೊಂದಿಗೆ ಚರ್ಚಿಸಿ ಅವರ ಅನುಭವಗಳನ್ನು ಸಹ ತೆಗೆದುಕೊಳ್ಳಿ.
6) ನಿಮ್ಮ ಮಾಹಿತಿ ಸಂಗ್ರಹಣೆ ಪೂರ್ವಾಗ್ರಹ ಪೀಡಿತವಲ್ಲದಿರಲಿ.
7) ನಿಮ್ಮದೇ ಆದ ದೃಷ್ಟಿಕೋನದಿಂದ ಎಲ್ಲವನ್ನೂ ನೋಡಬೇಡಿ.
8) ಆತ್ಮಸಾಕ್ಷಿಗೆ ಅನುಗುಣವಾಗಿ ಉತ್ತರಿಸಿ.
9) ಹೆಚ್ಚಿನ ವಿವರ, ಮಾಹಿತಿ, ತಪಾಸಣೆ, ಪರಿಹಾರ-ಇವುಗಳಿಗಾಗಿ ತಜ್ಞರ ಸಲಹೆಯನ್ನು ಪಡೆಯಿರಿ.

## ಹಾಗಾದರೆ ಕಲಿಕಾ ನ್ಯೂನತೆಯುಳ್ಳ ಮಗುವನ್ನು ಗುರುತಿಸುವುದು ಹೇಗೆ?

**ಔಪಚಾರಿಕ ರೀತಿ:**

1) **'ಪ್ರಮಾಣೀಕೃತ ಸಾಧನಾ ಪರೀಕ್ಷೆ:** ಮಗುವು ಓದುತ್ತಿರುವ ತರಗತಿಯಲ್ಲಿ ಅವನ ವಯಸ್ಸಿಗೆ ಅನುಗುಣವಾಗಿ ನಿರ್ದಿಷ್ಟ ಮಟ್ಟದಲ್ಲಿ ಓದುವ, ಬರೆಯುವ ಮತ್ತು ಗಣಿತದ ಕುಶಲತೆಗಳನ್ನು ಬೆಳೆಸಿಕೊಂಡಿರುವುದೆ ಎಂದು ಖಾತರಿಪಡಿಸಿಕೊಳ್ಳುವ ಸಾಧನೆಯ ಪರೀಕ್ಷೆ (achievement test)ಗಳು ಲಭ್ಯವಿವೆ. ಆ ಪರೀಕ್ಷೆಗಳನ್ನು ನೀಡಲು ಮಾರ್ಗದರ್ಶನವೂ ಇರುತ್ತದೆ.

2) **ಬೆಳವಣಿಗೆಯ ಮೈಲಿಗಲ್ಲುಗಳ ಪಟ್ಟಿ:** ಮಕ್ಕಳ ವಯಸ್ಸಿಗನುಗುಣವಾಗಿ ಕಾಣಬರುವ ವರ್ತನೆಗಳನ್ನು ಪಟ್ಟಿ ಮಾಡುತ್ತಾರೆ. **ಉದಾ:** ಒಂದನೇ ವಯಸ್ಸಿಗೆ ಮಗುವು ನಡೆಯುವುದು, ಕೆಲವು ಪದಗಳನ್ನು ಅರ್ಥಪೂರ್ಣವಾಗಿ ಉಪಯೋಗಿಸುವುದು –ಇತ್ಯಾದಿ. ಇದರ ಆಧಾರದಲ್ಲಿ ಮಗುವಿನ ಮೆದುಳಿನ ಬೆಳವಣಿಗೆಯನ್ನು ಅಂದಾಜು ಮಾಡಬಹುದು. ಆದರೆ, ಔಪಚಾರಿಕ ವಿಧಾನಗಳಿಂದ ಮಕ್ಕಳ ಸಮಸ್ಯೆಯನ್ನು ಗುರುತಿಸಲು ತರಬೇತಿಯ ಅಗತ್ಯವಿದೆ. ಆದ್ದರಿಂದ ನಿಮ್ಮ ಮಗುವನ್ನು ಪರೀಕ್ಷಿಸಲು ಅಖಿಲಭಾರತ ವಾಕ್ ಶ್ರವಣ ಸಂಸ್ಥೆಗೆ ಕರೆತರುವುದು ಒಳಿತು.

## ಆ) ಅನೌಪಚಾರಿಕ ರೀತಿ:–

1) **ಸೂಕ್ಷ್ಮವಾಗಿ ಗಮನಿಸುವುದು:–** ಮಗುವಿನ ದೈನಂದಿನ ಕಾರ್ಯಕಲಾಪಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಬಂದರೆ, ಕೆಲವೊಂದು ಅಸಹಜ ವರ್ತನೆಗಳು ನಮಗೆ ಕಾಣಬರುತ್ತವೆ. ಅವುಗಳ ಆಧಾರದಲ್ಲೂ ಮಕ್ಕಳ ಸಮಸ್ಯೆಯನ್ನು ಮೊದಲ ಹಂತದಲ್ಲಿ ಗುರುತಿಸಬಹುದು.

2) **ದೈನಂದಿನ ಕೆಲಸದ ಪುಸ್ತಕ:–** ಮಗುವಿನ ಶಾಲೆಯ ಬರವಣಿಗೆಯ ಪುಸ್ತಕವನ್ನು ಅವಲೋಕಿಸಿದರೆ ಮಗುವು ಮಾಡುವ ನಿರ್ದಿಷ್ಟ ದೋಷದ ಪರಿಚಯ ಆಗುತ್ತದೆ. ಇದರಿಂದ ಕೂಡ ಮಗುವಿನ ಸಮಸ್ಯೆಯ ಪರಿಚಯ ಆಗುತ್ತದೆ.

3) . **ನೀವೇ ತಯಾರಿಸಿ ನೀಡಿದ ಪರೀಕ್ಷೆ:–** ಮಾನಕೀಕೃತ ಪರೀಕ್ಷೆಯು ನಿಮಗೆ ಸಿಗುವುದು ಕಷ್ಟವಾಗುತ್ತದೆ ಮತ್ತು ಅದನ್ನು ನಿರ್ವಹಿಸುವ ರೀತಿಯೂ ನಿಮಗೆ ತಿಳಿದಿರುವುದಿಲ್ಲ. ಆದ್ದರಿಂದ, ಸರಳವಾದ ಪರೀಕ್ಷೆಯೊಂದನ್ನು ನೀವೇ ತಯಾರಿಸಿ ಮಕ್ಕಳಿಗೆ ನೀಡಬಹುದು. (ತಯಾರಿಸುವ ವಿಧಾನ ಮುಂದಿನ ಪುಟಗಳಲ್ಲಿದೆ.)

ಮಗುವಿಗೆ ಸಮಸ್ಯೆಯಿದೆ ಎಂದು ಊಹಿಸಿಕೊಂಡ ತಕ್ಷಣ ಧೃತಿಗೆಡಬೇಕಿಲ್ಲ. ಮೊಲಿಗೆ ಅದನ್ನು ದೃಢಪಡಿಸಿಕೊಳ್ಳಬೇಕು. ಅದಕ್ಕಾಗಿ ವಿವಿರವಾದ ಪರೀಕ್ಷೆಗಳನ್ನು ಮಾಡಬೇಕು. ತಜ್ಞರನ್ನು ಸಂಪರ್ಕಿಸಿ.

## ಇ) ವಿವರವಾದ ಪರೀಕ್ಷೆಗಳು:–

**ಔಪಚಾರಿಕ ರೀತಿ:**

1) **ಪ್ರಾಮಾಣೀಕೃತ/ಮಾನಕೀಕೃತ ವಿವರವಾದ ಪರೀಕ್ಷೆ:**

ಸಾಧನಾ ಪರೀಕ್ಷೆಯಂತೆಯೇ ವಿವರವಾದ ಪರೀಕ್ಷೆಗಳು ಲಭ್ಯ. ಇದರ ಆಧಾರದಲ್ಲಿ ಮಗುವಿನ ನಿರ್ದಿಷ್ಟ ದೋಷಗಳು ಹಾಗೂ ಮಟ್ಟವನ್ನು ತಿಳಿದುಕೊಳ್ಳಬಹುದು.

2) **ತೊಂದರೆಗಳ ವಿಶ್ಲೇಷಣೆ:–**

ಸಾಮಾನ್ಯ ರೀತಿಯ ತೊಂದರೆಗಳ ಮತ್ತು ಅದಕ್ಕೆ ಕಾರಣಗಳ ಪಟ್ಟಿಯನ್ನು ತಯಾರಿಸಬೇಕು.ಆ ಪಟ್ಟಿಯ ಆಧಾರದಲ್ಲಿ ಮಗುವಿನ ತೊಂದರೆಗಳನ್ನು ಪತ್ತೆಹಚ್ಚಿ ಅದಕ್ಕೆ ಈ ಕೆಳಕಂಡ ರೀತಿಯಲ್ಲಿ ಕಾರಣಗಳನ್ನು ತಿಳಿದುಕೊಳ್ಳಬಹುದು. ಆದರೆ, ಈ ಪರೀಕ್ಷೆಗಳು ತಜ್ಞರ ಮಾರ್ಗದರ್ಶನದಲ್ಲಿ ನಡೆಯಬೇಕು. ನಮ್ಮ ಸಂಸ್ಥೆಯಲ್ಲಿ ನಿಮಗೆ ಈ ನೆರವು ಸಿಗುತ್ತದೆ.

**ಅನೌಪಚಾರಿಕ ರೀತಿ**

1) **ದೈನಂದಿನ ಶಾಲಾ ಚಟುವಟಿಕೆಯ ಪರಿಶೀಲನೆ:**

ಮಗುವಿನ ಚಟುವಟಿಕೆಯನ್ನು ವೀಕ್ಷಿಸಿ, ಒಂದು ಕಡೆ ಅವನ ಅಸಹಜ ವರ್ತನೆಯ ಪಟ್ಟಿಯನ್ನು ತಯಾರಿಸಬೇಕು. ದಿನಕ್ಕೆ ಎಷ್ಟು ಸಲ ಆ ರೀತಿ ವರ್ತನೆ ತೋರಿಸಿದ್ದಾನೆ ಎಂದು ಗುರುತಿಸಿಕೊಳ್ಳಬೇಕು. ಇದರ ಆಧಾರದಲ್ಲಿ ಮಗುವಿನ ಸಮಸ್ಯೆಯ ಆಳದ ಪರಿಚಯ ಆಗುತ್ತದೆ.

2) **ತೊಂದರೆಗಳ ಬಗ್ಗೆ ಮಕ್ಕಳ ವಿವರಣೆ:**

ಈ ರೀತಿಯ ಮಕ್ಕಳ ತಪ್ಪುಗಳಿಗೆ ಅವರದೇ ವಿವರಣೆಯನ್ನು ಪ್ರಶ್ನೆ ಉತ್ತರ ರೂಪದಲ್ಲಿ ಪಡೆಯುವುದು. ಇದರಿಂದ ಮಗುವಿನ ಮನಸ್ಸಿನಲ್ಲಿ ನಡೆಯುವ ತುಮುಲ ಹಾಗೂ ಅದರ ಇತ್ಯರ್ಥ ಅರ್ಥವಾಗುತ್ತದೆ. ಪೂರ್ಣ ವಿವರಗಳಿಗಾಗಿ ವೃತ್ತಿ ನಿರತ ತಜ್ಞರನ್ನು ಭೇಟಿ ಮಾಡಿ.

## ಮಗುವನ್ನು ನಾವೂ ಪರೀಕ್ಷೆ ಮಾಡಬಹುದು

**ಕೆಲವು ಪರೀಕ್ಷೆಗಳು:**

ಕಲಿಕಾ ನ್ಯೂನತೆಯುಳ್ಳ ಮಕ್ಕಳ ಗುಣಲಕ್ಷಣಗಳ ಆಧಾರದಲ್ಲಿ ಗಮನಿಸಬಹುದಾದ ವಿಷಯಗಳನ್ನು ಮಾತ್ರ ಶೇಖರಿಸಿ ಒಂದು ಪಟ್ಟಿ ತಯಾರಿಸಬೇಕು. ಆ ವರ್ತನೆಗಳು ಕಣ್ಣಿಗೆ ಕಾಣಿಸುವಂತಹದ್ದು ಮತ್ತು ಅಳೆಯಲು ಸಾಧ್ಯವಾಗಿರುವಂತಹದ್ದಾಗಿರಬೇಕು. ಪ್ರತಿಯೊಂದು ವರ್ತನೆಯ ಎದುರು ಯಾವಾಗಲೂ, ಪದೇಪದೇ, ಸುಮಾರಾಗಿ ಅಥವಾ ಇಲ್ಲವೇ ಇಲ್ಲ ಎಂದು ಅಳತೆಯನ್ನು ಸೂಚಿಸಿ.

### ಕಲಿಕಾ ನ್ಯೂನತೆಯ ಮೊದಲ ಹಂತದ ಶೋಧನೆಗೆ ' ವರ್ತನೆಯ ತಪಶೀಲು ಮಾದರಿ'

| ಕ್ರ.ಸಂ | ವರ್ತನೆಗಳು | ಯಾವಾಗಲೂ | ಪದೇಪದೇ | ಸುಮಾರಾಗಿ | ಇಲ್ಲವೇಇಲ್ಲ |
|---|---|---|---|---|---|
| 1 | ಪದಗಳ ಅರ್ಥ ತಿಳಿಯಲು ಕಷ್ಟ | | | | |
| 2 | ಮೌಖಿಕವಾಗಿ ಹೇಳಿದ್ದನ್ನು ನೆನಪಿಟ್ಟುಕೊಳ್ಳಲು ತೊಂದರೆ | | | | |
| 3 | ವಾಕ್ಯ ಪೂರ್ತಿಯಾಗಿ ಮಾತನಾಡುವುದಿಲ್ಲ | | | | |
| 4 | ಓದುವ ಕೆಲಸವನ್ನು ಮುಂದೂಡುವುದು | | | | |
| 5 | ದೋಷಪೂರಿತ ಕೆಟ್ಟ ಕೈ ಬರಹ | | | | |

ಮೇಲಿನ ತಪಶೀಲಿನ ಪಟ್ಟಿಯಲ್ಲಿ ಮಗುವಿನ ಹೆಚ್ಚಿನ ವರ್ತನೆಗಳ ತೊಂದರೆಗಳು 'ಯಾವಾಗಲೂ' ಅಥವಾ 'ಪದೇ ಪದೇ' ಎಂದು ಬಂದರೆ ಆ ಮಗುವನ್ನು ಮುಂದಿನ ಪರೀಕ್ಷೆಗೆ ಒಳಪಡಿಸಬೇಕು. ಈ ರೀತಿಯ ಪರೀಕ್ಷೆ ಮಾಡುವಾಗ ಮಗುವಿನ ಭಾಷಾಜ್ಞಾನ, ಓದುವುದು, ಬರೆಯುವುದು ಮತ್ತು ಗಣಿತ ಜ್ಞಾನವನ್ನೂ ಪರೀಕ್ಷೆಗೆ ಒಳಪಡಿಸಬೇಕು. ಹಾಗೆ ಮಾಡುವಾಗ ಈ ಕೆಳಕಂಡ ಅಂಶಗಳನ್ನು ಗಮನಿಸಬೇಕು.

**ಭಾಷೆ:**




1) ಆಯಾ ತರಗತಿಯ ಭಾಷಾ ಪಠ್ಯ ಪುಸ್ತಕವನ್ನು ಆಧರಿಸಿ, ಆ ತರಗತಿ/ವಯಸ್ಸಿಗನುಗುಣವಾದ ಭಾಷಾ ಅಂಶಗಳನ್ನು ಆರಿಸಿಕೊಳ್ಳಬೇಕು.
2) ಬೇರೆ ಬೇರೆ ತರಗತಿಗೆ ಬೇರೆ ಬೇರೆ ಪರೀಕ್ಷೆಗಳನ್ನು ತಯಾರಿಸಬೇಕು. ಆಯಾ ತರಗತಿಯ ಭಾಷಾ ಪಠ್ಯ ಪುಸ್ತಕದ ಆಧಾರದ ಮೇಲೆ ವಿಷಯಗಳನ್ನು ಆರಿಸಿಕೊಳ್ಳಿ.
3) ಮಗುವಿನ ಕೇಳುವ ಹಾಗೂ ಹೇಳುವ ಕೌಶಲವನ್ನು ಪರೀಕ್ಷಿಸುವಂತಿರಬೇಕು.
4) ಆ ಪರೀಕ್ಷೆಯನ್ನು ತರಗತಿಯ ಎಲ್ಲಾ ಮಕ್ಕಳಿಗೂ ಕೊಟ್ಟು, ಸರಾಸರಿ ಅಂಕ ಎಷ್ಟು ಎಂದು ಗುರುತಿಟ್ಟುಕೊಳ್ಳಬೇಕು.
5) ನಾಲ್ಕನೆಯ ತರಗತಿಯ ಮಗು ಅದೇ ತರಗತಿಯ ಪಠ್ಯ ಪುಸ್ತಕದ ಆಧಾರದಲ್ಲಿ ತಯಾರಿಸಿದ ಭಾಷಾ ಸಾಧನಾ ಪರೀಕ್ಷೆಯಲ್ಲಿ ಸರಾಸರಿಗಿಂತ ಕಡಿಮೆ ಅಂಕಗಳಿಸಿದರೆ ಅದಕ್ಕೆ 3ನೇ, 2ನೇ ಹಾಗೆಯೇ 1ನೇ ತರಗತಿಯ ಪರೀಕ್ಷೆಯನ್ನು ನೀಡಬೇಕು. ಎರಡು ವರ್ಗಕ್ಕಿಂತ ಕಡಿಮೆಯ ಮಟ್ಟ ಇದ್ದರೆ ವಿವರವಾದ ಪರೀಕ್ಷೆ ನೀಡಿ ನಿರ್ದಿಷ್ಟ ತೊಂದರೆಗಳನ್ನು ಪತ್ತೆ ಹಚ್ಚಬೇಕು. ಇದಕ್ಕೆ ತಜ್ಞರ ಸಲಹೆ ಪಡೆಯಬೇಕು.

**ಓದುವುದು:**

1) ಓದುವುದಕ್ಕೂ ಸಹ ಭಾಷೆಯ ಪರೀಕ್ಷೆಗೆ ತಯಾರಿಸಿದಂತೆಯೇ ಪದಗಳನ್ನು ವಿವಿಧ ವರ್ಗಗಳ ಭಾಷಾ ಪಠ್ಯ ಪುಸ್ತಕಗಳಿಂದ ಎಲ್ಲಾ ರೀತಿಯ ಪದಗಳ ಪಟ್ಟಿ ತಯಾರಿಸಬೇಕು.
2) ಒಬ್ಬೊಬ್ಬರಾಗಿ ಎಲ್ಲಾ ಮಕ್ಕಳನ್ನೂ ಆ ಪಟ್ಟಿಯನ್ನು ಓದಿಸಿ ತರಗತಿಯ ಸರಾಸರಿ ನಿರ್ಣಯಿಸಬೇಕು.
3) ಅತೀ ಸುಲಭ ಮತ್ತು ಅತೀ ಕಷ್ಟದ ಪದಗಳನ್ನು ತೆಗೆದು ಉಳಿದ ಪದಗಳನ್ನು ಕೊನೆಯ ಹಂತಕ್ಕೆ ಉಳಿಸಬೇಕು (25 ರಿಂದ 30 ಪದಗಳು).
4) ಇದನ್ನು ವ್ಯಕ್ತಿಗತವಾಗಿ ಆಯಾ ಮಗುವಿನ ಮಟ್ಟಕ್ಕೆ ಅನುಸಾರವಾಗಿ ಬಳಸಬೇಕು.
5) ಭಾಷಾ ಪರೀಕ್ಷೆಯಲ್ಲಿ ತೆಗೆದುಕೊಂಡಂತೆ ನಿರ್ಣಯವನ್ನು ತೆಗೆದುಕೊಳ್ಳಬೇಕು.

**ಬರೆಯುವುದು:**

ಓದುವ ಪರೀಕ್ಷೆಯನ್ನೇ ಇದಕ್ಕೂ ಬಳಸಿ, ಅದೇ ವಿಧಾನವನ್ನು ಅನುಸರಿಸಬೇಕು. ಮೇಲಿನಂತೆ ಮಗುವಿನ ಮಟ್ಟವನ್ನು ನಿರ್ಣಯಿಸಬೇಕು.

**ಗಣಿತ:**

ಗಣಿತದ ಪಠ್ಯ ಪುಸ್ತಕದಿಂದ ತರಗತಿಗೆ ಅನುಗುಣವಾಗಿ ಪರಿಕಲ್ಪನೆಗಳನ್ನು ಆರಿಸಿಕೊಂಡು ಪರೀಕ್ಷೆಯನ್ನು ತಯಾರಿಸಿ ಮೇಲೆ ತಿಳಿಸಿದ ವಿಧಾನವನ್ನೇ ಅನುಸರಿಸಬೇಕು.

## ಬೇರೆ ಯಾವ ತರಹದ ತೊಂದರೆಗಳನ್ನು ನಾವು 'ಕಲಿಕಾ ನ್ಯೂನತೆ' ಎಂದು ತಪ್ಪಾಗಿ ತಿಳಿಯುತ್ತೇವೆ?

ಹಲವಾರು ಸಂದರ್ಭಗಳಲ್ಲಿ ನಾವು ಬೇರೆ ಬೇರೆ ತೊಂದರೆಗಳನ್ನು ಕಲಿಕಾ ನ್ಯೂನತೆ ಎಂದು ಸುಲಭವಾಗಿ ಹೇಳಿಬಿಡುತ್ತೇವೆ. ಶಾಲಾ ಮಕ್ಕಳಲ್ಲಿ ಸಾಮಾನ್ಯವಾಗಿ ಕಂಡು ಬರುವ, ಕಲಿಕೆಗೆ ತೊಡಕಾಗುವ ಹಲವಾರು ಸಮಸ್ಯೆಗಳಿವೆ. ಅವು ಮೇಲ್ನೋಟಕ್ಕೆ ಅರಿವಿಗೆ ಬರುವುದಿಲ್ಲ. ವಿವರವಾಗಿ ವಿಶ್ಲೇಷಿಸಿದರೆ ಮಾತ್ರ ಇವುಗಳಿಗಿರುವ ಸೂಕ್ಷ್ಮ ಆದರೆ ಸರಿಯಾದ ವ್ಯತ್ಯಾಸ ಗೊತ್ತಾಗುತ್ತದೆ. ಇದು ನಮಗೆ ತುಂಬಾ ಮುಖ್ಯ. ಏಕೆಂದರೆ ತಪ್ಪು ತಿಳಿವಳಿಕೆಯಿಂದ ನಾವು ನೀಡುವ ಪರಿಹಾರ ಸೂತ್ರಗಳು ಮಗುವಿಗೆ ಹೊಂದಿಕೆಯಾಗುವುದಿಲ್ಲ. ಇದು ಮಗುವನ್ನು ಹಾಗೂ ನಿಮ್ಮನ್ನು ಮತ್ತಷ್ಟು ಸಂಕಷ್ಟಕ್ಕೆ ಸಿಲುಕಿಸುತ್ತದೆ. ಹಲವು ಸಂದರ್ಭಗಳಲ್ಲಿ ಸುಲಭವಾಗಿ ಪರಿಹರಿಸಬಹುದಾದ ಸಮಸ್ಯೆಗೆ ಅನಾವಶ್ಯಕವಾಗಿ ಹೆಚ್ಚಿನ ಶ್ರಮ ವಹಿಸುತ್ತೇವೆ. ಗುಬ್ಬಿಗೆ ಬ್ರಹ್ಮಾಸ್ತ್ರ ಏಕೆ? ಕೆಲವೊಮ್ಮೆ ಇತರ ಸಮಸ್ಯೆಗಳು ಕಲಿಕಾ ನ್ಯೂನತೆಯ ಜೊತೆಯಾಗಿಯೇ ಒಂದು ಮಗುವಿನಲ್ಲಿ ಇರಬಹುದು ಅಥವಾ ಇದೇ ಒಂದು ಬೇರೆ ಸಮಸ್ಯೆಯಾಗಿ ಕಾಣಬಹುದು. ಅಂಥಹ ಕೆಲವನ್ನು ಇಲ್ಲಿ ಕೊಡಲಾಗಿದ

### ಅ) ಮಂದಗತಿಯಲ್ಲಿ ಕಲಿಯುವ ಮಕ್ಕಳು:

ಇವರು ಹೊರನೋಟಕ್ಕೆ ಸಾಮಾನ್ಯ ಮಕ್ಕಳಂತೆ ಕಂಡು ಬರುತ್ತಾರೆ. ತರಗತಿಯಲ್ಲಿ ಪಠ್ಯ ವಿಷಯಗಳಲ್ಲಿ ಹಿಂದುಳಿಯುತ್ತಾರೆ. ಇದಕ್ಕೆ ಕಾರಣ, ಇವರ ಬುದ್ಧಿಶಕ್ತಿಯ ಮಟ್ಟ ಸಾಮಾನ್ಯಕ್ಕಿಂತ ಸ್ವಲ್ಪ ಕಡಿಮೆ ಇರುತ್ತದೆ.

ಉದಾ: ಸಾಮಾನ್ಯ ಮಕ್ಕಳ ಬುದ್ಧಿ ಶಕ್ತಿಯನ್ನು ಮನಶಾಸ್ತ್ರಜ್ಞರು ಐ.ಕ್ಯೂ (I.Q.)ಮಾಪನದಲ್ಲಿ ಅಳೆಯುವಾಗ 100 ಎಂದು ಹೇಳುತ್ತಾರೆ. ಆದರೆ, ಈ ಮಕ್ಕಳ ಐ.ಕ್ಯೂ 70 ರಿಂದ 90 ರ ಒಳಗೆ ಇರುತ್ತದೆ. ಇವರು ಬುದ್ಧಿಮಾಂದ್ಯರಲ್ಲ. ಬುದ್ಧಿಶಕ್ತಿ ಸ್ವಲ್ಪ ಪ್ರಮಾಣದಲ್ಲಿ ಕಡಿಮೆ ಇರುತ್ತದೆ. ಇವರು ಕಲಿಯಲು ಸಾಧ್ಯ. ಆದರೆ ಇವರ ಕಲಿಕೆ ಮಂದ ಗತಿಯುಲ್ಲಿ ಸಾಗುತ್ತದೆ. ಅಂದರೆ ಮಗುವಿಗೆ 10 ವರ್ಷ ಇದ್ದರೆ, ಅವರ ಕಲಿಕೆ 8 ವರ್ಷದ ಮಗುವಿನ ಹಂತದಲ್ಲಿ ಸಾಗುತ್ತದೆ. ಪೋಷಕರು ಇಂತಹ ಮಕ್ಕಳ ಸಾಮರ್ಥ್ಯಕ್ಕೆ ತಕ್ಕುದಾದ ಶೈಕ್ಷಣಿಕ ನಿರೀಕ್ಷೆಗಳನ್ನು ಇರಿಸಿಕೊಂಡು ಆ ನಿಟ್ಟಿನಲ್ಲಿ ಕೆಲಸ ಮಾಡಿದರೆ ಮಗು ಸ್ವಾವಲಂಬಿಯಾಗಿ ತನ್ನ ಜೀವನ ನಿರ್ವಹಿಸಿಕೊಳ್ಳಬಹುದು.

### ಆ) ಗಮನ ಕೇಂದ್ರೀಕರಣ ಮಾಡದ/ಅತೀ ಚಟುವಟಿಕೆಯ ಮಕ್ಕಳು (Attention Deficit Disorder/Attention Deficit Hyperactivity disorder).

ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುವ ಈ ತೊಂದರೆ ತುಂಬಾ ಆತಂಕಕಾರಿ. ಇವರಿಗೆ ಸಾಮಾನ್ಯ ಮಕ್ಕಳಿಗಿರುವಷ್ಟು ಅಥವಾ ಇನ್ನೂ ಹೆಚ್ಚು ಬುದ್ಧಿಶಕ್ತಿ ಇರುತ್ತದೆ. ಆದರೆ ಈ ಮಕ್ಕಳಿಗೆ ಒಂದೇ ವಿಷಯವಾದ ಮೇಲೆ ಹೆಚ್ಚು ಸಮಯ ಗಮನ ಕೇಂದ್ರೀಕರಿಸಲು ಆಗುವುದಿಲ್ಲ. ಕೆಲವರಿಗೆ ಇದರ ಜೊತೆಗೆ ಅತಿ ಚಟುವಟಿಕೆಯೂ ಸೇರಿಕೊಂಡಿರುತ್ತದೆ. ಹೊರನೋಟಕ್ಕೆ ಮಗು ಶೈಕ್ಷಣಿಕವಾಗಿ ಹಿಂದುಳಿಯುತ್ತ ಬರುವುದು ಗೋಚರವಾಗುತ್ತದೆ. ವಿವರವಾಗಿ ಪರಿಶೀಲಿಸಿದರೆ ಮಾತ್ರ ಈ ಸಮಸ್ಯೆ ತಿಳಿಯುತ್ತದೆ. (ಆದರೆ, ಅತೀ ಚಟುವಟಿಕೆ ಇದ್ದರೆ ಅದು ಹೊರನೋಟಕ್ಕೇ ತಿಳಿಯುತ್ತದೆ). ಕಲಿಕಾ ನ್ಯೂನತೆ ಇರುವ ಶೇ.30 ರಷ್ಟು ಮಕ್ಕಳಿಗೆ ಈ ತೊಂದರೆ ಇರುತ್ತದೆ ಎಂದು ಕೆಲವು ಸಂಶೋಧನೆಗಳು ತಿಳಿಸಿವೆ. ಈ ಸಮಸ್ಯೆ ತೀವ್ರವಾಗಿದ್ದರೆ ತಜ್ಞ ವೈದ್ಯರು ಕೆಲವು ಔಷಧಿಗಳನ್ನು ಸಲಹೆ ಮಾಡುತ್ತಾರೆ. ಜೊತೆಗೆ ಆಹಾರ, ಪಥ್ಯ, ವರ್ತನಾ ಮಾರ್ಪಾಡು – ಮುಂತಾದ ಚಿಕಿತ್ಸಾ ವಿಧಾನಗಳನ್ನು ಅನುಸರಿಸಿ, ನಂತರ ಅಗತ್ಯವಿದ್ದರೆ



ಪರಿಹಾರಾತ್ಮಕ ಬೋಧನೆಯನ್ನು ನೀಡಬೇಕು. ಮಗುವಿನ ಸಮಸ್ಯೆ ಕೇವಲ ಗಮನ ಕೇಂದ್ರೀಕರಣ ಮಾಡದ/ ಅತೀ ಚಟುವಟಿಕೆಯಾಗಿದ್ದರೆ ಮೇಲೆ ಹೇಳಿದ ಚಿಕಿತ್ಸಾ ಕ್ರಮಗಳನ್ನು ಅಳವಡಿಸಿದರೆ ಕಲಿಕೆಯಲ್ಲಿ ಸುಧಾರಣೆ ಕಂಡು ಬರುತ್ತದೆ. ಪರಿಹಾರಾತ್ಮಕ ಬೋಧನೆ ಬೇಕಾಗದೇ ಇರಬಹುದು.

**ಇ) ಶೈಕ್ಷಣಿಕವಾಗಿ ಹಿಂದುಳಿದ ಮಕ್ಕಳು: (Scholastic backwardness/under achievement)**

ಮೇಲೆ ತಿಳಿಸಿರುವ ಯಾವುದೇ ಗುಂಪಿಗೆ ಸೇರದ ಮಕ್ಕಳ ಈ ಸಮಸ್ಯೆಗೆ ತನ್ನದೇ ಆದ ಲಕ್ಷಣಗಳಿವೆ. ಹೊರನೋಟಕ್ಕೆ ಕಾಣುವುದೆಂದರೆ ಈಗ ಎಲ್ಲ ಸಮಸ್ಯೆಗಳಿಗೂ ತಿಳಿಸಿದ ಒಂದೇ ಲಕ್ಷಣವೆಂದರೆ ಕಡಿಮೆ ಅಂಕ ಗಳಿಸುವುದು ಅಥವಾ ಕೆಲವು ವಿಷಯಗಳಲ್ಲಿ ಅನುತ್ತೀರ್ಣರಾಗುವುದು, ಆದರೆ, ಇಲ್ಲಿ, ಇದಕ್ಕೆ ಕಾರಣ ಬೇರೆ. ಪದೇ ಪದೇ ಶಾಲೆಯನ್ನು ಬದಲು ಮಾಡುತ್ತಿದ್ದರೆ ಕೆಲವು ಮಕ್ಕಳಿಗೆ ಶಾಲೆಯ ಪರಿಸರ ಹೊಂದಾಣಿಕೆಯಾಗಲು ಹೆಚ್ಚು ಸಮಯ ಬೇಕಾಗುತ್ತದೆ. ಆ ಸಮಯದಲ್ಲಿ ನಡೆದ ಪಾಠ ಅರ್ಥವಾಗದೆ ಹೋದರೆ ಮತ್ತು ಮುಂದಿನ ಪಾಠಗಳು ಹಿಂದಿನ ಪಾಠವನ್ನು ಅವಲಂಬಿಸಿದ್ದರೆ ಮಗುವು ಮುಗ್ಗರಿಸುವುದು ಖಂಡಿತ. ಸಮಸ್ಯೆಯನ್ನು ವ್ಯಕ್ತಪಡಿಸಲು ಮಗುವಿಗೆ ಆಗದು. ಮತ್ತು ಕೆಲವು ಸಂದರ್ಭಗಳಲ್ಲಿ ಒಂದು ನಿರ್ದಿಷ್ಟ ಪಾಠ ಮಾಡುವ ಶಿಕ್ಷಕರ ಬಗ್ಗೆ ಮಗುವಿಗೆ ಕಾರಣಾಂತರಗಳಿಂದ ಒಳ್ಳೆಯ ಅಭಿಪ್ರಾಯ ಇಲ್ಲದಿದ್ದರೆ ಮಗುವು ಈ ವಿಷಯವನ್ನು ಕಲಿಯುವಲ್ಲಿ ಹಿಂದುಳಿಯುತ್ತದೆ. ಇವಲ್ಲದೆ ಸಾಮರ್ಥ್ಯಕ್ಕೆ ಮೀರಿದ ಸಾಧನೆಗಾಗಿ ಪೋಷಕರ ಪ್ರೀತಿಪೂರ್ವಕ ಒತ್ತಾಯ, ತನ್ನಿಂದ ಇದು ಸಾಧ್ಯವೇ ಎಂಬ ಆತಂಕ, ಪಠ್ಯೇತರ ಚಟುವಟಿಕೆಯ ಕಡೆಗೆ ವಿಶೇಷ ಒಲವು, ಸರಿಯಾದ ಅಭ್ಯಾಸ ಕ್ರಮ ಇಲ್ಲದೇ ಇರುವುದು, ಅತೀ ಆತ್ಮ ವಿಶ್ವಾಸ, ಕ್ಷಣಿಕ ಸುಖ ನೀಡುವ ಆಹಾರ–ವಿಹಾರದ ಕಡೆ ಹೆಚ್ಚಿನ ಆದ್ಯತೆ –ಇವೆಲ್ಲವೂ ವಿದ್ಯಾರ್ಥಿಗಳು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣಗಳು. ಸೂಕ್ತ ಸಮಯದಲ್ಲಿ ಅವರ ಸಮಸ್ಯೆಗಳನ್ನು ಗುರುತಿಸಿ, ಸರಿಯಾದ ಮಾರ್ಗದರ್ಶನ ನೀಡಿದರೆ ಈ ಮಕ್ಕಳು ಶೈಕ್ಷಣಿಕ ಪ್ರಗತಿ ಸಾಧಿಸಲು ಸಾಧ್ಯ.




**ಈ) ಭಾವನಾತ್ಮಕ/ಮಾನಸಿಕ ಸಮಸ್ಯೆ:**

ಸ್ವಭಾವತಃ ಕೆಲವು ಮಕ್ಕಳು ಸೂಕ್ಷ್ಮ. ಇವರು ಆನುವಂಶೀಯತೆ ಅಥವಾ ಪರಿಸರದ ಏರುಪೇರಿನಿಂದ ಕಿರಿಕಿರಿ ಅನುಭವಿಸುವರು. ಕ್ಷುಲ್ಲಕ ಕಾರಣಗಳಿಗೆ ಅಳುವುದು, ಹತಾಶರಾಗುವುದು, ದುಗುಡವನ್ನು ಅನುಭವಿಸುವುದು –ಇಂತಹವುಗಳ ಮೂಲಕ ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಕಠಿಣ ಶಿಕ್ಷೆ ಅಥವಾ ಕಠಿಣ ಮಾತು ಯಾವುದನ್ನೂ ಇವರಿಗೆ ಸಹಿಸಿಕೊಳ್ಳಲು ಆಗುವುದಿಲ್ಲ. ನಮ್ಮ ದಿನ ನಿತ್ಯದ ಜೀವನದಲ್ಲಿ ಕಂಡು ಬರುವ ಈ ಎಲ್ಲಾ ನಕಾರಾತ್ಮಕ ಸಂಜ್ಞೆಗಳಿಂದಾಗಿ ಇವರು ಜೀವನದಲ್ಲಿ ಜಿಗುಪ್ಸೆಗೆ ಒಳಗಾಗುತ್ತಾರೆ. ಭಾವನಾತ್ಮಕವಾಗಿ ಸ್ಥಿಮಿತ ಕಳೆದುಕೊಳ್ಳುತ್ತಾರೆ. ಇತ್ತೀಚಿನ ಸಾಮಾಜಿಕ ಪರಿಸ್ಥಿತಿಗಳಾದಂತಹ ಅವಿಭಕ್ತ ಕುಟುಂಬ, ಒಂದೇ ಮಗು, ಪೋಷಕರ ಸಮಯದ ಅಭಾವ, ಕುಟುಂಬದ ಇತರ ಸದಸ್ಯರು ಹಾಗೂ ಗೆಳೆಯರೊಡನೆ ಸಂತಸದಿಂದ ಕಾಲ ಕಳೆಯಲು ಆಗದಿರುವುದು–ಇವೆಲ್ಲ ಸೇರಿ ಮಕ್ಕಳನ್ನು ಅಭದ್ರತೆಯ ಕೂಪಕ್ಕೆ ತಳ್ಳುತ್ತಿದೆ. ಇದು ಸದ್ದಿಲ್ಲದೆ ಬೆಳೆಯುತ್ತಾ ಖಿನ್ನತೆ ಉದ್ವೇಗಗಳಿಗೆ ದಾರಿ ಮಾಡಿಕೊಡುತ್ತದೆ. ಅವಲಂಬನೆ, ಭಯದಂತಹಾ ವರ್ತನೆಗಳು ಮಕ್ಕಳಲ್ಲಿ ಮನೆ ಮಾಡುತ್ತವೆ. ಇವೆಲ್ಲದರ ಕಾರಣದಿಂದ ಕಲಿಕೆಯಲ್ಲಿ ಏಕಾಗ್ರತೆಯನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಸಾಮರ್ಥ್ಯ ಇದ್ದರೂ ಭಾವನಾತ್ಮಕ/ಮಾನಸಿಕ ಅಸಮತೋಲನದಿಂದಾಗಿ ಮಗುವು ಕಲಿಕೆಯಲ್ಲಿ ಹಿಂದುಳಿಯುತ್ತದೆ.

**ಉ) ನಡತೆಯ ದೋಷ:– (Conduct disorder)**

ಆನುವಂಶೀಯತೆ, ಉತ್ತಮ ಆಹಾರದ ಕೊರತೆ, ಅಸಹಜ ಪರಿಸರ ಮುಂತಾದ ಕಾರಣಗಳಿಂದ ಮಕ್ಕಳಲ್ಲಿ ಈ ದೋಷ ಕಂಡು ಬರುತ್ತದೆ. ಇವರು ವಿನಾ ಕಾರಣ ಅಥವಾ ಕ್ಷುಲ್ಲಕ ಕಾರಣಕ್ಕಾಗಿ ಸಹ ವಿದ್ಯಾರ್ಥಿ ಇಲ್ಲವೇ ಒಡಹುಟ್ಟಿದವರಿಗೆ ದೈಹಿಕ ಅಥವಾ ಮಾನಸಿಕ ಹಿಂಸೆ ಕೊಡುತ್ತಾರೆ. ಪರಚುವುದು, ಕಚ್ಚುವುದು, ತನ್ನ ಅಧಿಪತ್ಯ ಸ್ಥಾಪಿಸಲು ಯತ್ನಿಸುವುದು – ಹೀಗೆ ಅಸಹಜ ರೀತಿಯಲ್ಲಿ ವರ್ತಿಸುತ್ತಾರೆ. ಜೊತೆಗೆ ಬೇರೆಯವರ ವಸ್ತುಗಳನ್ನು ಎತ್ತಿ ಕೊಳ್ಳುವುದು, ತನ್ನ ರಕ್ಷಣೆಗೋಸ್ಕರ ಹಲವು ಸುಳ್ಳುಗಳನ್ನು ಸೃಷ್ಟಿಸಿ ಹೇಳುವುದು (ಕಥೆಯ ಹಾಗೆ), ಪ್ರಾಣಿಗಳಿಗೆ ವಿನಾ ಕಾರಣ ಹಿಂಸೆ ಕೊಡುವುದು– ಇವೇ ಮುಂತಾದ ವರ್ತನೆಗಳನ್ನು ತೋರಿಸುತ್ತಾರೆ. ಇವರು ಶೈಕ್ಷಣಿಕವಾಗಿ ಹಿಂದುಳಿಯುತ್ತಾರೆ. ತಂದೆ/ತಾಯಿ/ಉಪಾಧ್ಯಾಯರು ಸೂಕ್ಷ್ಮವಾಗಿ ಗಮನಿಸಿ, ಮಕ್ಕಳ ವರ್ತನೆಯನ್ನು ಅಭ್ಯಸಿಸಿದರೆ ಮಾತ್ರ ಇಂತಹ ಸಮಸ್ಯೆಯು ನಮ್ಮ ಅರಿವಿಗೆ ಬರುತ್ತದೆ. ಇಲ್ಲದಿದ್ದರೆ ಓದುವುದರಲ್ಲಿ" ಹಿಂದಳಿದಿದ್ದಾನೆ" ಎಂದು ಅದಕ್ಕೆ ಪರಿಹಾರ ಹುಡುಕಲು ಹೋಗುತ್ತೇವೆ.

ಇಲ್ಲಿ ಹೇಳಿರುವ ಸಮಸ್ಯೆಗಳು ಹೊರ ನೋಟಕ್ಕೆ ಒಂದೇ ರೀತಿಯ ಲಕ್ಷಣವಾಗಿ ಕಾಣಿಸುತ್ತವೆ. "ಓದಿನಲ್ಲಿ ಆಸಕ್ತಿ ಇಲ, ಮುಂದಿನ ತರಗತಿಗೆ ಹೋಗುತ್ತಿದ್ದಂತೆಯೇ ಅಂಕಗಳಿಸುವುದು ಕಡಿಮೆಯಾಗುತ್ತಿದೆ"– ಇತ್ಯಾದಿ ಸಮಸ್ಯೆಗಳನ್ನು ಸರಿಯಾಗಿ ಗಮನಿಸಿ, ಗುರುತಿಸಿ, ವಿಶ್ಲೇಷಿಸಿದರೆ ಅದರ ನಿಜಸ್ವರೂಪ ತಿಳಿಯುತ್ತದೆ, ಹಾಗೂ ಅದಕ್ಕೆ ಪೂರಕವಾದ ಪರಿಹಾರ ನೀಡಬಹುದು.

**ಒಟ್ಟಿನಲ್ಲಿ ಹೇಳುವುದಾದರೆ, ಓದಿನಲ್ಲಿ ಹಿಂದುಳಿದವರೆಲ್ಲಾ ಕಲಿಕಾ ನ್ಯೂನತೆಯಿಂದ ಬಳಲುತ್ತಿರುವವರಲ್ಲ.**

## ಸ್ವ – ಅಧ್ಯಯನಕ್ಕೆ ಪ್ರಶ್ನೆಗಳು

1) ಕಲಿಕಾ ನ್ಯೂನತೆಗೆ (ಔಪಚಾರಿಕ) ತಪಾಸಣೆಯನ್ನು ಯಾರು ಮತ್ತು ಹೇಗೆ ಮಾಡುತ್ತಾರೆ?
2) ಈ ತಪಾಸಣೆಯನ್ನು ನಾವು ಹೇಗೆ ಮಾಡಬಹುದು?
3) ಮಗುವಿಗೆ ಸಮಸ್ಯೆಯಿರಬಹುದೆಂದು ಶಂಕಿಸುತ್ತಲೇ ನಾವು ಏನು ಮಾಡಬಹುದು?
4) ಮಕ್ಕಳ ನಿರ್ದಿಷ್ಟ ತೊಂದರೆಗಳನ್ನು ತಿಳಿಯಲು ಪರೀಕ್ಷೆಗಳನ್ನು ಯಾರು ಮತ್ತು ಹೇಗೆ ಮಾಡುತ್ತಾರೆ?
5) ಇದನ್ನು ನಾವೇ ಮಾಡುವುದಾದರೆ ಹೇಗೆ ಮಾಡಬಹುದು?
6) ಮಗುವಿನಲ್ಲಿ ಈ ಸಮಸ್ಯೆ ಇದೆ ಎಂದು ನಿಖರವಾಗಿ ನಾವೇ ತಿಳಿದುಕೊಳ್ಳಲು ಏನಾದರೂ ವಿಧಾನ ಇದೆಯೇ?
7) ಮಗುವನ್ನು ಪರೀಕ್ಷಿಸಲು ನಾವೇ ಪರೀಕ್ಷೆಗಳನ್ನು ಹೇಗೆ ತಯಾರಿಸಿಕೊಳ್ಳಬಹುದು?
8) ಹೊರನೋಟಕ್ಕೆ ಕಲಿಕಾ ನ್ಯೂನತೆಯಂತೆಯೇ ಗೋಚರಿಸುವ ಮಕ್ಕಳನ್ನು ಕಾಡುವ ಇತರ ತೊಂದರೆಗಳೇನಾದರೂ ಇರುವ ಸಾಧ್ಯತೆಗಳಿವೆಯೇ? ಪ್ರತಿಯೊಂದನ್ನೂ ದಯವಿಟ್ಟು ವಿವರಿಸಿ.

# ಅಧ್ಯಾಯ – 3

## ಕಲಿಕಾ ನ್ಯೂನತೆಯಿರುವ ಮಕ್ಕಳಿಗೆ ನೆರವು

ಮಗುವಿನ ತೊಂದರೆಯನ್ನು ಸರಿಯಾಗಿ ಗುರುತಿಸುವುದು, ಮಗುವಿಗೆ ಸಹಾಯ ಮಾಡಿದಂತೆ. ಮಗುವಿನ ದೋಷ ಪತ್ತೆ ಮಾಡಿದಾಗ ಅದು ಅರ್ಧ ಪರಿಹಾರವಾದಂತೆ. ಪರಿಹಾರಾತ್ಮಕ ಬೋಧನೆ ನಮ್ಮ ಮೇಲೆ ಅವಲಂಬಿತವಾಗಿದೆ. ನಮ್ಮ ನೈಜ ಕಾಳಜಿ, ಪ್ರೀತಿಪೂರ್ವಕ ಬೋಧನಾ ಕ್ರಮ ಮಗುವಿನ ಭಯವನ್ನು ಹೊಡೆದು ಓಡಿಸುವುದರಲ್ಲಿ ಸಂಶಯವಿಲ್ಲ. ಬೋಧನಾ ವಿಧಾನದ ಬಗ್ಗೆ ಒಂದಷ್ಟು ಮಾಹಿತಿ ಪಡೆದು ಸೂಕ್ತ ರೀತಿಯ ವ್ಯಕ್ತಿಗತ ಕಾರ್ಯಕ್ರಮವೊಂದನ್ನು ರೂಪಿಸಿ, ಅದರ ಕಾರ್ಯ ದಕ್ಷತೆಯ ಮೌಲ್ಯ ಮಾಪನವನ್ನೂ ನಾವೇ ಮಾಡಿ, ಅದರ ವ್ಯಾಪಕತೆಯನ್ನು ನಾವೇ ನಿರ್ಧರಿಸಬಹುದು. ಅದರ ಆಧಾರದ ಮೇಲೆ, ನಾವು ಬೇರೆ ಮಕ್ಕಳಿಗೂ ಸಹಾಯ ಮಾಡಬಹುದು, ನೊಂದ ತಂದೆ–ತಾಯಂದರಿಗೆ ಸಾಂತ್ವನ ನೀಡಬಹುದು.

### ಪರಿಹಾರಾತ್ಮಕ ಬೋಧನೆಯೊಂದೇ ರಾಮಬಾಣ

ಕಲಿಕೆಯ ನ್ಯೂನತೆಯಿರುವ ಮಕ್ಕಳ ಶೈಕ್ಷಣಿಕ ಹಾಗೂ ಸಾಮಾಜಿಕ ಬೆಳವಣಿಗೆ ಕುಂಠಿತಗೊಂಡಿರುತ್ತದೆ. ಆದ್ದರಿಂದ, ಅವರಿಗೆ ಶಾಲಾ ಜೀವನದುದ್ದಕ್ಕೂ ಪರಿಹಾರಾತ್ಮಕ ಬೋಧನೆ ಒದಗಿಸಬೇಕು. ಈ ಕಾರಣಕ್ಕಾಗಿ ಈ ಮಹತ್ತರ ಜವಾಬ್ದಾರಿಯನ್ನು ನಾವೇ ಹೊರುವುದು ಸೂಕ್ತ. ಮಗುವು ಬೆಳೆದಂತೆಯೇ ಈ ಸಮಸ್ಯೆ ಜಟಿಲವಾಗುತ್ತಾ ಹೋಗುತ್ತದೆಯೇ ಹೊರತು ತನ್ನಿಂದ ತಾನೇ ಕಡಿಮೆಯಾಗಿರುವುದಿಲ್ಲ. ಇಂತಹಾ ಮಕ್ಕಳಿಗೆ ತಮ್ಮ ಸಮವಯಸ್ಕರಂತೆ ಯಾವುದೋ ಒಂದು/ ಕೆಲವು ಕ್ಷೇತ್ರಗಳಲ್ಲಿ ಹೆಚ್ಚಿನ ಆಸಕ್ತಿ ಇರುತ್ತವೆ. ಅದೇ ರೀತಿ ಕೆಲವೊಂದು ಮಿತಿಗಳೂ ಇರುತ್ತವೆ. ಅವುಗಳನ್ನು ಪರಿಗಣಿಸಿ, ಪ್ರತಿಯೊಬ್ಬ ಮಗುವಿಗೂ ಅವನಿಗೆ ಸೂಕ್ತವಾಗಿ ಹೊಂದಿಕೊಳ್ಳುವ ಪರಿಹಾರಾತ್ಮಕ ಬೋಧನೆಯನ್ನು ಯೋಜಿಸಬೇಕು. ಇವರಿಗೆ ಪಾಠ ಹೇಳಿಕೊಡಲು ಮುಖ್ಯವಾಗಿ ಬೇಕಿರುವುದು ಅವರ ಬಗ್ಗೆ ನೈಜ ಕಾಳಜಿ ಹಾಗೂ ಸ್ವಲ್ಪ ಪ್ರಮಾಣದ ಸೃಜನಶೀಲತೆ (creativity). ಇವೆರಡು ಗುಣಗಳೂ ನಿಮ್ಮಲ್ಲಿ ಖಂಡಿತ ಇವೆ. ಅವುಗಳನ್ನು ಉಪಯೋಗಿಸಿಕೊಂಡು ಅದರ ಜೊತೆಗೆ ಕೆಳಗೆ ಕೊಟ್ಟಿರುವ ಕೆಲವು ಸರಳ ತತ್ತ್ವಗಳನ್ನು ಅನುಸರಿಸಿ ಮಕ್ಕಳಿಗೆ ತರಬೇತಿ ನೀಡಲು ಸಿದ್ಧತೆ ಮಾಡಿಕೊಳ್ಳಬೇಕು. ಪರಿಹಾರಾತ್ಮಕ ಬೋಧನೆ ಒಂದೇ ನಮ್ಮ ಮಗುವಿನ ಸಮಸ್ಯೆಗೆ ರಾಮಬಾಣ. ಈ ಕೌಶಲವನ್ನು ನಾವೇ ರೂಢಿಸಿಕೊಂಡರೆ, ನಾವೇ ಮಗುವಿಗೆ ಸಾಧ್ಯವಾದಷ್ಟು ಸಹಾಯ ಮಾಡಬಹುದು. ಈ ಕೆಳಗಿನ ತತ್ತ್ವಗಳು ಈ ದಿಸೆಯಲ್ಲಿ ದಾರಿ ತೋರಿಸುತ್ತದೆ.

## ವ್ಯಕ್ತಿಗತ ಶಿಕ್ಷಣ ಯೋಜನೆ – ಯೋಜಕರು ನಾವೆ ... ಯೋಜನೆ ಹೀಗಿರಲಿ

ಮಗುವಿನ ವಿಶೇಷ ಅಗತ್ಯವನ್ನು ಎತ್ತಿ ಹಿಡಿಯಲು ವ್ಯಕ್ತಿಗತ ಶಿಕ್ಷಣ ಯೋಜನೆಯನ್ನು (IEP) ರೂಪಿಸಿಕೊಳ್ಳಬೇಕು. ಇದಕ್ಕಾಗಿ ತಜ್ಞರ ಸಹಾಯವನ್ನು ಪಡೆಯುವುದು ಅವಶ್ಯಕ.

## ನಾವೇನು ಮಾಡಬೇಕು?

1) ಮಗುವಿನ ಪಕ್ಕದಲ್ಲಿ ಕುಳಿತುಕೊಂಡು ಅವನ ಬೇಕು ಬೇಡಗಳಿಗೆ ಸ್ಪಂದಿಸುತ್ತಾ ಕಲಿಕಾ ಅನುಭವಗಳನ್ನು ಹಂಚಿಕೊಳ್ಳಬೇಕು.
2) ವಿವಿಧ ಕ್ಷೇತ್ರಗಳಲ್ಲಿನ ತಜ್ಞರ ಸಹಾಯ ತೆಗೆದುಕೊಳ್ಳಬೇಕು.
3) ಕಣ್ಣು, ಕಿವಿ, ಸ್ಪರ್ಶದ ಜ್ಞಾನವನ್ನು ಉಪಯೋಗಿಸಿಕೊಂಡು ಪಾಠ ಹೇಳಬೇಕು. (ಬರೀ ಹೇಳುವುದಕ್ಕಿಂತ ತೋರಿಸುವುದು, ಮುಟ್ಟಿ ಅನುಭವಿಸುವುದು ಹೆಚ್ಚು ಫಲಕಾರಿ).
4) ಪ್ರತಿಯೊಂದು ಪಠ್ಯ ವಿಷಯದಲ್ಲೂ ಉಪಯೋಗಿಸುವ ಪದಗಳು ಹಾಗೂ ವಾಕ್ಯಗಳು ಆದಷ್ಟೂ ಸರಳವಾಗಿರಲಿ.
5) ಬೋಧನೆ ಸರಳತೆಯಿಂದ ಕ್ಲಿಷ್ಟತೆಯ ಕಡೆಗೆ ಹಂತ ಹಂತವಾಗಿ ಹೋಗಬೇಕು.
6) ಮಗುವಿಗೆ ತಿಳಿದಿರುವ ವಿಷಯವನ್ನು ಆಧರಿಸಿ ಹೊಸ ಪರಿಕಲ್ಪನೆಗಳನ್ನು ಹೇಳಿಕೊಡಬೇಕು.
7) ಪರಿಕಲ್ಪನೆಗಳನ್ನು ಮಕ್ಕಳಿಗೆ ಮನದಟ್ಟು ಮಾಡಿಸುವುದು ಅಗತ್ಯ, ಬರೀ ಬಾಯಿ ಪಾಠ ಈ ಮಕ್ಕಳಿಗೆ ಅನುಕೂಲಕರವಲ್ಲ.
8) ಮಗುವಿನಲ್ಲಿ ಆತ್ಮ ವಿಶ್ವಾಸ ಮೂಡಿಸಿ, ತಾನೇ ಸ್ವತ: ಕಲಿಯುವಂತೆ ಉತ್ತೇಜಿಸಬೇಕು.
9) ಒಂದು ವಾಕ್ಯದಲ್ಲಿ ಒಂದೇ ವಿಷಯದ ಬಗ್ಗೆ ಮಾಹಿತಿ ನೀಡಬೇಕು (ಹೆಚ್ಚು ವಿಷಯಗಳಿದ್ದರೆ ಮಗುವಿಗೆ ಗೊಂದಲ ಖಂಡಿತ).
10) ಶಾಲೆಯಲ್ಲಿ ನಡೆಯುವ ಪಾಠ ಪ್ರವಚನಗಬಳನ್ನು ಮನೆಯಲ್ಲಿ ಅನೌಪಚಾರಿಕವಾಗಿ ಮಾಡಿಸಬೇಕು.
11) ದೈನಂದಿನ ಕೆಲಸ ಕಾರ್ಯಕ್ಕೆ ಅವರಿಗೆ ಸ್ವಲ್ಪ ಹೆಚ್ಚು ವೇಳೆ ಕೊಡಬೇಕು, ಮನೆಯಲ್ಲಿಯೂ ಇದನ್ನು ಮಾಡುವಂತೆ ಹೇಳಬೇಕು.
12) ಮಗುವಿನ ಓದು, ಬರಹ, ಮಾತಿನ ಬಗ್ಗೆ ಎಲ್ಲರೆದುರು ಹೇಳಬಾರದು. ಬದಲು ಮಗುವಿನ ಜೊತೆ ಮುಕ್ತವಾಗಿ ಚರ್ಚಿಸಿ ಅದರ ಕಷ್ಟವನ್ನು ಮನವರಿಕೆ ಮಾಡಿಕೊಳ್ಳಲು ಪ್ರಯತ್ನಿಸಬೇಕು.
13) ಮಗುವು ಮಾಡಿದ ಪ್ರತಿಯೊಂದು ಒಳ್ಳೆಯ ಕಾರ್ಯವನ್ನೂ ಮನಃಪೂರ್ತಿಯಾಗಿ ಶ್ಲಾಘಿಸಿ, ಅಭಿನಂದಿಸಬೇಕು. ಇದು ಅವರಿಗೆ ಮುಂದೆಯೂ ನಾನು ಈ ರೀತಿ ಮಾಡಬೇಕು ಎಂಬ ಭಾವನೆಯನ್ನು ಬೆಳೆಸುತ್ತದೆ.
14) ಮಗುವಿನೊಡನೆ ಚರ್ಚಿಸುವಾಗ, ಬೋಧಿಸುವಾಗ, ಅವನ ಮುಖವನ್ನು ಆಸಕ್ತಿಯಿಂದ ಗಮನಿಸಬೇಕು. ಇದು ಅವನ ಗಮನ ಬೇರೆ ಕಡೆ ಹೋಗುವುದನ್ನು ತಪ್ಪಿಸುತ್ತದೆ.

ಮೇಲೆ ತಿಳಿಸಿದ ಸಾಮಾನ್ಯ ತತ್ತ್ವಗಳ ಜೊತೆಗೆ ಮಗುವಿನ ನಿರ್ದಿಷ್ಟ ತೊಂದರೆಯನ್ನು ಪರಿಹರಿಸಲು ಕೆಲವು ನಿರ್ದಿಷ್ಟ ತತ್ತ್ವಗಳೂ ಇದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

## ನಿರ್ದಿಷ್ಟ ತತ್ತ್ವಗಳು

**ಭಾಷಾ ಬೆಳವಣಿಗೆ ಕುಂಠಿತಗೊಂಡಿದ್ದರೆ: ನಾವೇನು ಮಾಡಬೇಕು?**

1) ಶುದ್ಧವಾದ ಸರಳ ಭಾಷೆಯನ್ನು ಮಗುವಿಗೆ ಕೇಳಿಸಬೇಕು:

2) ದಿನನಿತ್ಯದ ನಿಮ್ಮ ಮಾತಿನಲ್ಲಿ ಕಲಿತ ಹೊಸ ಪದಗಳನ್ನು ಪದೇ ಪದೇ ಬಳಸಿ ಮಗುವೂ ಆ ಶಬ್ದವನ್ನು ಬಳಸುವಂತೆ ಪ್ರೋತ್ಸಾಹಿಸಬೇಕು.

3) ಮಗುವು ಮಾತಿನಲ್ಲಿ ತಪ್ಪು ಪದ ಪ್ರಯೋಗಿಸಿದರೆ ಅಲ್ಲೇ ಸರಿಪಡಿಸಬೇಕು.

4) ಒಂದೇ ಅರ್ಥವಿರುವ ಎರಡು ಅಥವಾ ಹೆಚ್ಚು ಪದಗಳು ಇದ್ದರೆ, ಅದರ ಬಳಕೆಯನ್ನು ವಾಕ್ಯದಲ್ಲಿ ಹೇಳಿ ಕಲಿಸಬೇಕು.

**ಉದಾ:** ಕದವನ್ನು ತೆಗೆ.

ಬಾಗಿಲನ್ನು ತೆಗೆ.

ನದಿಯಲ್ಲಿ ನೀರು ಹರಿಯುತ್ತದೆ.

ಹೊಳೆಯಲ್ಲಿ ನೀರು ಹರಿಯುತ್ತದೆ.

5) ಒಂದೇ ಪದಕ್ಕೆ ವಿವಿಧ ಅರ್ಥಗಳಿದ್ದರೆ ಅದನ್ನು ವಿವರಿಸಬೇಕು.

**ಉದಾ:** ಶುಚಿಯಾದ ಬಟ್ಟೆ ಧರಿಸಿದರೆ ಮನಸ್ಸು ಉಲ್ಲಾಸದಿಂದ ಇರುತ್ತದೆ.

ಸೈನಿಕನು ಯುದ್ಧದಲ್ಲಿ ಮಡಿದನು.

ಮಕ್ಕಳು ಮೈದಾನದಲ್ಲಿ ಆಡುತ್ತಿದ್ದಾರೆ.

ಆಡು ಸೊಪ್ಪನ್ನು ತಿನ್ನುತ್ತಿದೆ ಇತ್ಯಾದಿ.

6) ಕಲಿಕೆಯ ವಿಕಲತೆ ಇರುವ ಮಕ್ಕಳು ಮೂಲ ಕಲ್ಪನೆಗಳನ್ನು ಸ್ವಭಾವಿಕವಾಗಿ ಕಲಿಯಲು ಅಸಮರ್ಥರು. ಆದ್ದರಿಂದ ಇಂತ ಇಂತಹವುಗಳನ್ನು ಉದ್ದೇಶ ಪೂರ್ವಕವಾಗಿ, ಚಟುವಟಿಕೆಗಳ ಮೂಲಕ ಮಗುವಿಗೆ ಹೇಳಿಕೊಡಬೇಕು.

**ಉದಾ:** ಎಡ, ಬಲ/ ಪೂರ್ವ, ಪಶ್ಚಿಮ

ಹತ್ತಿರ, ದೂರ

ಹೆಚ್ಚು, ಕಡಿಮೆ

ಮೊದಲು, ನಂತರ, ಕೊನೆ

ಅಡ್ಡ, ಉದ್ದ– ಇತ್ಯಾದಿ

7) ಬರವಣಿಗೆಯ ಎಲ್ಲಾ ಚಟುವಟಿಕೆಗಳಲ್ಲೂ ಶುದ್ಧ ಕಾಗುಣಿತವನ್ನು ಕಲಿಯಲು ಉತ್ತೇಜಿಸಬೇಕು. ಅಮೂರ್ತ ಪದಗಳ ಅರ್ಥವನ್ನು ಕಥೆ ಇಲ್ಲವೇ ಸಾಂದರ್ಭಿಕವಾಗಿ ಹೇಳಿ ಕೊಡಬೇಕು

**ಉದಾ:** ಜಿಪುಣ, ಅತಿ ಆಸೆ–ಇತ್ಯಾದಿ.

**ಪದಗಳು – ನಾವು ಮಾಡಬೇಕಾಗಿರುವುದು.**

1) ಉಕ್ತ ಲೇಖನವನ್ನು (Dictation) ಆಟದ ರೂಪದಲ್ಲಿ ಮಾಡಿಸಬೇಕು.

2) ಪತ್ರಿಕೆಗಳಲ್ಲಿ ಬರುವ ಪದಬಂಧವನ್ನು ತಪ್ಪದೆ ಮನೆಯಲ್ಲಿ ಎಲ್ಲರೂ ಸೇರಿ ಬರೆಯಬೇಕು.

3) ಕಣ್ಣು ಮುಚ್ಚಿ ಮರಳು, ಕಾಗದ, ನೀರು, ರಟ್ಟು, ಹಲಗೆ, ಬೆನ್ನು ಕೈ–ಓೀಗೆ ಹಲವು ವಸ್ತುಗಳ ಮೇಲೆ ಬರೆಸಬೇಕು. ಇಲ್ಲವೇ ನೀವು ಬರೆದು ಮಗುವಿನಿಂದ ಹೇಳಿಸಬೇಕು.

4) ಕಲಿತ ಹೊಸ ಪದವನ್ನು ಪದೇ ಪದೇ ಉಪಯೋಗಿಸಿ.

5) ಪದಗಳನ್ನು ಕತ್ತರಿಸಿ ವಸ್ತುವಿನ ಜೊತೆ ಜೋಡಿಸುವ ಆಟ ಆಡಿಸಬೇಕು ಅಥವಾ ಪದಗಳ ಪಟ್ಟಿಯನ್ನು ಮಾಡಿಸಬೇಕು.

## ವ್ಯಾಕರಣ – ನಮ್ಮ ಕೆಲಸಗಳು ಏನು?

1) ನಾವು ಮಗುವಿನ ಜೊತೆ ಪೂರ್ತಿ ವಾಕ್ಯದಲ್ಲಿ ಮಾತನಾಡಬೇಕು

2) ನಮ್ಮೊಂದಿಗೆ ಅವರೂ ಪೂರ್ತಿ ವಾಕ್ಯದಲ್ಲಿ ಮಾತನಾಡುವಂತೆ ಪ್ರೋತ್ಸಾಹಿಸಿ.

3) ಮಗುವು ಅರ್ಧ ವಾಕ್ಯ ರಚಿಸಿ ಗೊಂದಲಕ್ಕೊಳಗಾದರೆ ನಾವು ಅದನ್ನು ಪೂರ್ತಿಗೊಳಿಸಬೇಕು. (ಯಾವುದೇ ಕಾರಣಕ್ಕೂ ಮಗುವನ್ನು ನಿಂದಿಸಬಾರದು)

4) ತಪ್ಪು ವಾಕ್ಯ ಹೇಳಿದರೆ ಸರಿಪಡಿಸಿ, ಮತ್ತೆ ಹೇಳಿಸಬೇಕು.

5) ವಾಕ್ಯ ರಚನೆಯ ಆಟ ಆಡಬೇಕು.

6) ಸರಳ ವಾಕ್ಯ ಚೆನ್ನಾಗಿ ಬಂದನಂತರ ಕ್ಲಿಷ್ಟ ವಾಕ್ಯ ರಚಿಸಲು ಹೇಳಿ ಕೊಡಬೇಕು.

7) ಪುಟ್ಟ ಕಥೆಗಳನ್ನು (ವಯಸ್ಸಿಗನುಗುಣವಾಗಿ) ಮಕ್ಕಳಿಗೆ ನಿಧಾನವಾಗಿ ಆಸಕ್ತಿಕರವಾಗಿ ಓದಿ ಹೇಳಬೇಕು ಇವು ಚಿತ್ರ ಕಥೆಗಳಾದರೆ ಇನ್ನೂ ಉತ್ತಮ.

8) ಮಕ್ಕಳೂ ಓದುವಂತೆ ಉತ್ತೇಜಿಸಬೇಕು.

9) ಓದಿದ/ ಕೇಳಿದ ಕಥೆಯನ್ನು ಮಕ್ಕಳಿಂದ ಹೇಳಿಸಿ–ಕೇಳಿಸಿ–ಆನಂದಿಸಿ ಮಗುವನ್ನು ಉತ್ತೇಜಿಸಬೇಕು.

10) ಮಗುವಿನ ಆಸಕ್ತಿಯನ್ನು ಗಮನಿಸಿ, ಅದರ ಮೇಲೆ ಕುತೂಹಲಕಾರಿ ಪ್ರಶ್ನೆಗಳನ್ನು ಕೇಳಬೇಕು.

( ಇದರಿಂದ ಮಗುವು ಸಂತಸದಿಂದ ಉತ್ತರಿಸುತ್ತದೆ)

11) ಒಂದು ಆಟ ಪ್ರಾರಂಭಿಸಿ ಒಂದು ವಸ್ತುವನ್ನು ತೋರಿಸಿ ಅದರ ಬಗ್ಗೆ ಒಂದು ಮಗುವು ಏನಾದರೂ ಹೇಳಬೇಕು. ಇನ್ನೊಬ್ಬ ಅದನ್ನು ಮುಂದುವರಿಸಬೇಕು – ಹೀಗೆ ಆಟ ಮುಂದುವರಿಸಬೇಕು.

**ಉದಾಹರಣೆ:** 1) ಇದು ಒಂದು ಮೇಜು – ಒಂದು ಮಗುವು ಹೇಳಬೇಕು

2) ಇದಕ್ಕೆ ನಾಲ್ಕು ಕಾಲುಗಳಿವೆ – ಇನ್ನೊಂದು ಮಗುವು ಮುಂದುರಿಸಬೇಕು.

3) ಇದನ್ನು ಮರದಿಂದ ಮಾಡಿದ್ದಾರೆ – ಮತ್ತೊಂದು ಮಗುವು ಆಟವನ್ನು ಮುಂದುವರಿಸಬೇಕು.

4) ಬಡಗಿ ಮೇಜನ್ನು ತಯಾರಿಸಿದ್ದಾರೆ–.......... ಹೀಗೆ

12) ಮಗುವು ಹೇಳಿದ ಒಂದು ವಿಷಯದ ಬಗ್ಗೆ ಒಂದು ಕಥೆಯನ್ನು ಹೆಣೆಯಬೇಕು. ನಂತರ ಮಗುವಿನಿಂದ ಮಾಡಿಸಬೇಕು.

13) ಏನಾದರೂ ಆಸಕ್ತಿಕರ ಘಟನೆಯನ್ನು ಮಗುವಿಗೆ ಹೇಳಿಕೊಡಬೇಕು. ನಂತರ ಅದನ್ನು ತರಗತಿಯಲ್ಲಿ ಬೇರೆ ವಿದ್ಯಾರ್ಥಿಗಳಿಗೆ ಹೇಳುವಂತೆ ಹೇಳಬೇಕು.

14) ಒಂದು ವರ್ಣ ರಂಜಿತ ಚಿತ್ರವನ್ನು ತೋರಿಸಿ ಅದರ ಹಿಂದು ಮತ್ತು ಮುಂದಿನ ಘಟನೆಯನ್ನು ಕಲ್ಪಿಸಿಕೊಳ್ಳಲು ಹೇಳಬೇಕು.

15) ಮಕ್ಕಳು ಏನಾದರೂ ಹೇಳಲು ಬಂದರೆ ನಾವು ಕೆಲಸದ ಒತ್ತಡದಲ್ಲಿದ್ದರೂ ಕೇಳುವ ಉತ್ಸಾಹ ತೋರಿಸಬೇಕು.

## ಮಗುವಿನ ಓದುವಿಕೆ –ನಮ್ಮ ಗಮನ – ನಮ್ಮ ಸಹಕಾರ

ಓದುವ ತೊಂದರೆ ಇರುವ ಮಗುವಿಗೆ ಆ ತೊಂದರೆಯಿಂದ ಹೊರ ಬರಲು ನಮ್ಮ ಸಹಕಾರ ಬೇಕೇ ಬೇಕು. ಓದುವ ಕೌಶಲಕ್ಕೆ ಭಾಷೆಯ ಜ್ಞಾನ ಮೂಲವಾಗಿರುವುದರಿಂದ ಮೊದಲು ಭಾಷಾ ಜ್ಞಾನಕ್ಕೆ ಆದ್ಯತೆ ಕೊಡಬೇಕು. ಓದಲು ಕಲಿಯುವ ಹಂತದಲ್ಲಿ ಹಲವಾರು ರೀತಿಯ ತೊಂದರೆ ಬರುವ ಸಾಧ್ಯತೆ ಇರುವುದರಿಂದ ಅವುಗಳಿಗೆ ಯಾವ ರೀತಿಯ ಸಹಾಯ ನೀಡಬಹುದು ಎಂಬುದನ್ನು ಕೆಳಗೆ ತಿಳಿಸಲಾಗಿದೆ.

1) ಭಾಷೆಯ ಆಧಾರದಿಂದ ಸಂಪೂರ್ಣ ಓದಿಸಬೇಕು.

2) ಮಾತೃ ಭಾಷೆಯಲ್ಲಿರುವ ಆಕರ್ಷಕ ಪುಸ್ತಕಗಳನ್ನು ಸಂಗ್ರಹಿಸಿ ಮಗುವಿಗೆ ಕೊಡಬೇಕು.

3) ಚಿತ್ರಗಳನ್ನು ನೋಡುತ್ತಾ ಚಿತ್ರಗಳ ಕೆಳಗಡೆ ಬರೆದಿರುವುದನ್ನು ಓದುವಂತೆ ಉತ್ತೇಜಿಸಬೇಕು.

4) ಓದುವಾಗ ತಪ್ಪು ಮಾಡಿದ ಪದವನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಓದುವ ಅವಕಾಶ ಕಲ್ಪಿಸಬೇಕು.

5) ಅಕ್ಷರ ಗುರುತಿಸುವ ಹಲವು ಆಟಗಳನ್ನು ಆಡಿಸಬೇಕು.

## ಅಕ್ಷರವನ್ನು ನೋಡಿ ಅದರ ಉಚ್ಚಾರಣೆಯನ್ನು ತಿಳಿದುಕೊಳ್ಳುವುದು – ಹೀಗೆ ಮಾಡಬೇಕು

1) ಹೊಸ ಅಕ್ಷರವನ್ನು ಮಗುವಿಗೆ ತೋರಿಸಿ ಅದರ ಉಚ್ಚಾರಣೆಯನ್ನು ಹೇಳಿಕೊಡಬೇಕು. ಆ ಅಕ್ಷರವನ್ನು ಕಣ್ಣ ಮುಂದೆ ಇರಿಸಬೇಕು. ಆ ಶಬ್ದದಿಂದ ಪ್ರಾರಂಭವಾಗುವ ಇತರ ವಸ್ತುಗಳ ಹೆಸರುಗಳನ್ನು ಮಗುವಿನಿಂದ ಹೇಳಿಸುತ್ತಾ ಆಟದ ರೀತಿ ಆಡಿಸಬೇಕು.

2) ಒಂದು ಶಬ್ದವನ್ನು ನಾವು ಹೇಳಬೇಕು. ಅದಕ್ಕೆ ಹೊಂದುವ ಅಕ್ಷರವನ್ನು ಮಗುವು ಹಾಳೆಯಲ್ಲಿ ಬರೆಯಲಿ/ ತೋರಿಸಲಿ/ಗುಂಪಿನಿಂದ ಆರಿಸಿ ತೆಗೆಯಲಿ/ಬಣ್ಣ ತುಂಬಲಿ. 2–4 ಮಕ್ಕಳ ಗುಂಪಿನಲ್ಲಿ ಈ ಆಟ ಆಡಿಸಬೇಕು. ಹೀಗೆ ಮಾಡಿದರೆ ಉತ್ತಮ.

3) ಮಗುವಿಗೆ ಪರಿಚಯವಿರುವ ಕೆಲವು ಪದಗಳನ್ನು ಕಾರ್ಡಿನಲ್ಲಿ ಬರೆಯಬೇಕು. ಒಂದು ಕಾರ್ಡನ್ನು ತೋರಿಸಿ ಆದಷ್ಟೂ ಬೇಗ ಆ ಪದವನ್ನು ಓದುವಂತೆ ಮಾಡಬೇಕು. ಮೊದ ಮೊದಲು ಹೆಚ್ಚು ಸಮಯ ತೆಗೆದುಕೊಂಡರೂ ನಂತರ ಚುರುಕಾಗಿ ಪದವನ್ನು ಓದುತ್ತಾರೆ.



4) ಪದದ ಮೊದಲ ಅಕ್ಷರ ಹೇಳಬೇಕು. ಅದಕ್ಕೆ ಹೊಂದುವ ಪದವನ್ನು ಗುಂಪಿನಿಂದ ಆರಿಸಿ ತೆಗೆಯಲು ಮಗುವಿಗೆ ಉತ್ತೇಜನ ನೀಡಬೇಕು.

5) ಕೆಲವು ಸರಳ ವಾಕ್ಯಗಳನ್ನು ಕಾರ್ಡಿನಲ್ಲಿ ಬರೆದು ಅದರಲ್ಲಿ ಬರುವ ಒಂದು ಪದವನ್ನು ನಾವು ಹೇಳಬೇಕು. ತಕ್ಷಣ ಮಗು ಅದನ್ನು ತೋರಿಸಬೇಕು.

6) ಅಕ್ಷರದ ಗುಂಪಿನಿಂದ ಅಕ್ಷರಗಳನ್ನು ಆರಿಸಿ ತೆಗೆದು ಜೋಡಿಸಿ, ಪದಗಳನ್ನು ರಚಿಸಬೇಕು.

## ವಾಕ್ಯವನ್ನು ಓದುವುದು – ನಮ್ಮ ಕೆಲಸವೇನು?

ಪದವನ್ನು ಓದಲು ಕಲಿತ ಮೇಲೆ ವಾಕ್ಯವನ್ನು ಓದುವುದು ಸುಲಭ. ಪದಗಳನ್ನು ಬಿಡಿಸಿ ಬಿಡಿಸಿ ಓದಿದರೆ ವಾಕ್ಯದ ಪೂರ್ತಿ ಅರ್ಥ ತಿಳಿಯುವುದಿಲ್ಲ. ಆದ್ದರಿಂದ ಪದಗಳನ್ನು ಜೋಡಿಸಿಕೊಂಡು ಪೂರ್ತಿ ವಾಕ್ಯವನ್ನು ಓದುವ ರೀತಿಯನ್ನು ಮಗುವಿಗೆ ತಿಳಿಸಬೇಕು.

1) ಒಂದು ವಾಕ್ಯವನ್ನು ಕಪ್ಪು ಹಲಗೆಯ ಮೇಲೆ ಬರೆಯಬೇಕು. **ಉದಾ:** ನಾಯಿಯು ರಸ್ತೆಯನ್ನು ದಾಟಿ ಓಡಿತು. ಅದನ್ನು ಸ್ವಾಭಾವಿಕವಾಗಿ ಮಾತನಾಡುವಂತೆ ಓದಬೇಕು. ನಾವು ಓದಿದಂತೆಯೇ ಮಗುವಿನಿಂದ ಅದನ್ನು ಓದಿಸಬೇಕು. ಹೀಗೆ ಮಾಡಿದಾಗ ಓದಿದ ವಾಕ್ಯ ಚಿತ್ರದಂತೆ ಕಣ್ಣ ಮುಂದೆ ಬರುವಂತೆ ಅನ್ನಿಸಬೇಕು. ಈ ಅನುಭವವನ್ನು ಮಕ್ಕಳು ಅನುಭವಿಸುವಂತೆ ತರಬೇತಿ ಕೊಡಬೇಕು. ಆಗ ವಾಕ್ಯವು ಅರ್ಥಪೂರ್ಣ ಅನ್ನಿಸುತ್ತದೆ. ಈ ಮೇಲಿನ ವಾಕ್ಯವನ್ನು ಬಿಡಿಸಿ ಓದಿದರೆ–ನಾಯಿ/ ರಸ್ತೆ/ಓಡು ಈ ಮೂರು ಪದಗಳು ಮಗುವಿಗೆ ತಿಳಿಯುತ್ತದೆ. ಏನಾಯಿತು ಎಂಬುದು ಗೊತ್ತಾಗಿರುವುದಿಲ್ಲ. ಆದ್ದರಿಂದ ಪದಕ್ಕೆ ಪದ ಜೋಡಿಸುವ ರೀತಿ, ಪ್ರಾಮುಖ್ಯತೆ ನೀಡಬೇಕಾದ ಪದಕ್ಕೆ ಒತ್ತಡ ಹಾಕುವುದು, ಎಲ್ಲಿ ನಿಲ್ಲಿಸಬೇಕು, ನಿಧಾನಿಸಬೇಕು –ಹೀಗೆ ಎಲ್ಲಾ ರೀತಿಯ ತಿಳುವಳಿಕೆ ನೀಡಬೇಕು.



2. ಓದುವಾಗ ಪ್ರಶ್ನೆಗಳನ್ನು ಹಾಕಿಕೊಳ್ಳುವಂತೆ ಪ್ರೋತ್ಸಾಹಿಸಬೇಕು. ಓದಿದ್ದನ್ನು ಅರ್ಥ ಮಾಡಿಕೊಳ್ಳಲು ಹಾಗೂ ನೆನಪಿನಲ್ಲಿ ಇಟ್ಟುಕೊಳ್ಳಲು ಈ ವಿಧಾನ ಅತ್ಯಂತ ಸಹಕಾರಿ.

   **ಉದಾ:** ಕೃಷ್ಣನ ತಾತ ಚೀಲದಲ್ಲಿ ಹಣ್ಣುಗಳನ್ನು ತೆಗೆದುಕೊಂಡು ಹೋಗುತ್ತಿದ್ದಾರೆ.

   ಕೃಷ್ಣನ ತಾತ ಏನು ಮಾಡುತ್ತಿದ್ದಾರೆ?

   ಯಾರ ತಾತ ಹಣ್ಣುಗಳನ್ನು ತೆಗೆದುಕೊಂಡು ಹೋಗುತ್ತಿದ್ದಾರೆ?

   ತಾತ ಹಣ್ಣನ್ನು ಯಾವುದರಲ್ಲಿ ತೆಗೆದುಕೊಂಡು ಹೋಗುತ್ತಿದ್ದಾರೆ? ಇತ್ಯಾದಿ.

   ನಿಮಗೆ ಇದು ತುಂಬಾ ಕಷ್ಟದ ಹಾಗೂ ಸಮಯ ತೆಗೆದುಕೊಳ್ಳುವ ವಿಧಾನ ಎನ್ನಿಸುತ್ತದೆ. ಆದರೆ ಇದು ಅತ್ಯಂತ ಕಡಿಮೆ ಸಮಯದಲ್ಲಿ ಮಾಡಿ ಮುಗಿಸಬಹುದಾದ ಒಂದು ಅಭ್ಯಾಸ. ಮಾಡುತ್ತಾ ಹೋದಂತೆ ನಮಗೆ ಅನುಕೂಲಕರವಾಗುತ್ತದೆ.

3. ಒಂದು ಪದದ ಅರ್ಥಗೊತ್ತಿಲ್ಲದಿದ್ದರೂ, ವಾಕ್ಯದ ಆಧಾರದ ಮೇಲೆ ಪದದ ಅರ್ಥವನ್ನು ಊಹಿಸಬಹುವುದು. ಇದನ್ನು ಮಕ್ಕಳಿಗೆ ಅಭ್ಯಾಸ ಮಾಡಿಸಬೇಕು. ಆಗ ಅವರು ಓದಿದ ವಿಷಯವು ಅವರಿಗೆ ಮನವರಿಕೆಯಾಗುತ್ತದೆ. **ಉದಾ:** "ಸೋನಿಯಾ ಪ್ರಧಾನಿಯಾಗುವುದನ್ನು ವಿರೋಧಿಸಿ ಉಮಾಭಾರತಿ ರಾಜೀನಾಮೆ ನೀಡಿದರು". ಇಲ್ಲಿ **'ರಾಜೀನಾಮೆ'** ಎನ್ನುವ ಪದದ ಅರ್ಥ ಮಗುವಿಗೆ ತಿಳಿದಿಲ್ಲದಿದ್ದರೂ, ಒಂದು ನಿಮಿಷ ಆ ವಾಕ್ಯವನ್ನು ಪೂರ್ತಿಯಾಗಿ ಗಮನಿಸಿದರೆ ಆ ಹೊಸ ಪದದ ಅರ್ಥವು ತಿಳಿಯುತ್ತದೆ. ಇಂತಹ ಅಭ್ಯಾಸವನ್ನು ಪದೇ ಪದೇ ಮಕ್ಕಳಿಂದ ಮಾಡಿಸಬೇಕು. ಸ್ವಲ್ಪ ಸಮಯದ ನಂತರ ಅದೊಂದು ಸ್ವಾಭಾವಿಕ ಕ್ರಿಯೆಯಾಗುತ್ತದೆ.

4. ವಿರಾಮ ಚಿಹ್ನೆಗಳನ್ನು ಹಾಕಿದ್ದಾಗ, ಅದನ್ನು ಓದುವ ರೀತಿ ಮುಖ್ಯ. ಇಲ್ಲದಿದ್ದರೆ ಅಪಾರ್ಥವಾಗುತ್ತದೆ.
5. ಅರ್ಧ ಪುಟದಷ್ಟು ಓದಿಸಿ, ಅದನ್ನು ಸಂಕ್ಷಿಪ್ತವಾಗಿ ಹೇಳಿಸಬೇಕು. ಅಲ್ಲಿ ಹೊಸ ಪದ, ಮುಖ್ಯ ಪದ ಇವುಗಳನ್ನು ಬಣ್ಣಗಳಿಂದ ಗುರುತಿಸಲಿ
6. ಚುರುಕಾಗಿ ಓದುವ ವಿಧಾನವನ್ನು ಅಭ್ಯಾಸ ಮಾಡಿಸಬೇಕು.
7. ಸ್ವಂತವಾಗಿ ಓದುವುದು: ಮೊದಲು ಜೋರಾಗಿ ಓದಲಿ, ನಂತರ ತಪ್ಪನ್ನು ಸರಿಪಡಿಸಬೇಕು. ಆಮೇಲೆ ಮನಸ್ಸಿನಲ್ಲಿ ಓದಿಕೊಳ್ಳುವಂತೆ ಮಾಡಬೇಕು. ಈ ರೀತಿ ಮಾಡಿದರೆ ಓದಿನಲ್ಲಿ ಚುರುಕುತನ, ಸಾಮರ್ಥ್ಯ ಹೆಚ್ಚುತ್ತದೆ.

## ಬರವಣಿಗೆಯ ಕೌಶಲವನ್ನು ಉತ್ತಮ ಪಡಿಸುವ ವಿಧಾನಗಳು – ನಾವು ಮಾಡಬೇಕಾದುದೇನು?

**ಅ) ಮಗುವಿನಿಂದ ಅಕ್ಷರ ಬರೆಯಿಸುವ ಮೊದಲು ಅವನಿಗೆ ಬರವಣಿಗೆಗೆ ಬೇಕಾಗಿರುವ ಪೂರ್ವ ಸಿದ್ಧತೆ ಆಗಿದೆಯೇ ಎಂದು ಗಮನಿಸಬೇಕು.**

1) ಕಣ್ಣು ಕೈಯ ಹೊಂದಾಣಿಕೆ.
2) ಬೆರಳಿನಿಂದ ಆಕಾರಗಳನ್ನು ತಿದ್ದುವುದು.
3) ಅಕ್ಷರಗಳ ಆಕಾರವನ್ನು ಕಣ್ಣಿನಿಂದ ಗುರುತಿಸುವುದು.
4) ದಪ್ಪಗಿರುವ ಬಳಪ ಹಿಡಿದು ಗೆರೆ ಎಳೆಯುವುದು.

**ಆ) ಕುಳಿತುಕೊಳ್ಳುವ ರೀತಿ:**

1) ಮೇಜು ಮತ್ತು ಕುರ್ಚಿಯ ನಡುವಿರುವ ಅಂತರ.
2) ಕಣ್ಣು ಮತು ಹಾಳೆ ಸರಿಯಾದ ದೂರದಲ್ಲಿರಬೇಕು.
3) ಮೊಣಕೈ ಮೇಜಿನ ಮೇಲಿರುವ ಹಾಳೆಯನ್ನು ಒತ್ತಿ ಹಿಡಿದಿರಬೇಕು.
4) ಆರಾಮವಾಗಿ ಕುಳಿತುಕೊಳ್ಳಲು ಹಾಗೂ ಹಾಳೆ ಇಡಲು ಸ್ಥಳ ಬೇಕು.

**ಇ) ಪೆನ್ಸಿಲ್ ಹಿಡಿಯುವ ರೀತಿ:**

1) ಹೆಬ್ಬೆರಳು ಹಾಗೂ ತೋರು ಬೆರಳಿನ ಸಹಾಯದಿಂದ ಪೆನ್ಸಿಲ್ ಹಿಡಿದು ನಡು ಬೆರಳಿನ ಪಕ್ಕದಿಂದ ಪೆನ್ಸಿಲನ್ನು ಮೇಲಕ್ಕೆ ಲಘುವಾಗಿ ಒತ್ತಬೇಕು.
2) ಬರೆಯುವ ತುದಿಗಿಂತ ಸುಮಾರು ಒಂದು ಇಂಚಿನಷ್ಟು ಮೇಲೆ ಬೆರಳುಗಳ ಹಿಡಿತ ಇರಬೇಕು.
3) ಮಣಿಗಂಟು ಹಾಳೆಯ ಮೇಲೆ ವಿರಮಿಸಬೇಕು. ಬೆರಳುಗಳು ಮಾತ್ರ ಚಲಿಸಬೇಕು.



**ಈ) ಬರವಣಿಗೆ ಕೈ ಬರಹ**

1) ಪ್ರಾರಂಭಿಕ ಹಂತದಲ್ಲಿ ಸರಿಯಾದ ಸಾಮಗ್ರಿಗಳನ್ನು ಬಳಸಿ (ಸೂಕ್ತ ರೀತಿಯ ಕಾಗದ, ಸರಿ ಪ್ರಮಾಣದ ಪೆನ್ಸಿಲ್ ಇತ್ಯಾದಿ).

2) ಕಾಗದದ ಮೇಲೆ ಪೆನ್ಸಿಲ್ಲಿನ ಒತ್ತು ಸರಿಯಾದ ರೀತಿಯಲ್ಲಿ ಬೀಳುವುದನ್ನು ತೋರಿಸಿಕೊಡಿ. ಕೆಲವು ಮಕ್ಕಳು ಹೆಚ್ಚು ಒತ್ತಿ ಬರೆಯುತ್ತಾರೆ. ಕೆಲವರು ತೀರಾ (ಹಗುರವಾಗಿ) ಕಡಿಮೆ ಒತ್ತುತ್ತಾರೆ. ಆದ್ದರಿಂದ, ಎಷ್ಟು ಒತ್ತು ಕೊಟ್ಟರೆ ಬರವಣಿಗೆ ಸಲೀಸಾಗಿ ಸಾಗುತ್ತದೆ ಎಂಬುದನ್ನು ತಿದ್ದಿ ತೋರಿಸಿ ಅನುಕರಿಸುವಂತೆ ಮಾಡಬೇಕು.

3) ನಮ್ಮ ಬರವಣಿಗೆಯೂ ಆದಷ್ಟೂ ಚೊಕ್ಕಟವಾಗಿರಲಿ. ಮಕ್ಕಳು ಇದನ್ನು ಓರಿಯರಿಂದ ಕಲಿಯುತ್ತಾರೆ.

4) ದೈನಂದಿನ ಬರವಣಿಗೆಯ ಚಟುವಟಿಕೆಗಳೆಲ್ಲಾ ನಮ್ಮ ಮಾರ್ಗದರ್ಶನದಲ್ಲಿಯೇ ನಡೆಯಲಿ (ಬರವಣಿಗೆ ಸರಿಯಾಗುವ ತನಕ).

5) ನಿರ್ದಿಷ್ಟ ತಪ್ಪುಗಳನ್ನು ಮಗುವಿಗೆ ತಿಳಿಸಿ ಹೇಳಿ ಸರಿಪಡಿಸುತ್ತಾ ಬರಬೇಕು. ಪ್ರೀತಿಯಿಂದ, ನಿರಂತರ ತರಬೇತಿಯಿಂದ ಬರವಣಿಗೆ ಸುಧಾರಿಸುತ್ತದೆ.

6) ಮಗುವಿನ ಬರವಣಿಗೆಯನ್ನು ಸ್ವತಃ ನೋಡಿ ಸರಿಪಡಿಸುವ ರೀತಿ ಹೇಳಿ ಮಾಡಿಸಬೇಕು.

**ಉ) ಸ್ವಂತ ಬರವಣಿಗೆ:**

ಒಂದು ಚಿತ್ರ ಇಲ್ಲವೇ ಸಂದರ್ಭದ ಬಗ್ಗೆ ಯೋಚಿಸಬೇಕು. ಮನಸ್ಸಿಗೆ ತೋಚಿದ್ದನ್ನು ಕಾಗದದ ಮೇಲೆ ಬರೆಯಬೇಕು. ಪ್ರಶ್ನೆಗಳನ್ನು ಹಾಕಿಕೊಂಡು ಮಾಹಿತಿ ಸಂಗ್ರಹಿಸಬೇಕು. ನಂತರ ಕ್ರಮವಾಗಿ ಆ ವಾಕ್ಯಗಳನ್ನು ಒಂದರ ನಂತರ ಒಂದರಂತೆ ಕ್ರಮಬದ್ಧವಾಗಿ ಜೋಡಿಸಿ ಬರೆಯಬೇಕು.

## ನಾವು ಮಾಡಬೇಕಾಗಿರುವುದು

1) ಪದ ಸಂಪತ್ತನ್ನು ಆದಷ್ಟೂ ಹೆಚ್ಚಿನ ಮಟ್ಟಕ್ಕೆ ಬೆಳೆಸಬೇಕು. ಸಮಾನಾರ್ಥ, ವಿವಿಧಾರ್ಥ ಪದಗಳ ಬಳಕೆಯನ್ನು ಹೆಚ್ಚಿಸಿ ವಾಕ್ಯ ರಚಿಸಬೇಕು. ಮಗುವಿನಿಂದ ಪೂರ್ಣಗೊಳಿಸಬೇಕು, ಇಲ್ಲವೆ ಮಗುವು ರಚಿಸಿದ ವಾಕ್ಯವನ್ನು ನಾವು ಪೂರ್ಣಗೊಳಿಸಬೇಕು.

2) ಪದಗಳ ಪಟ್ಟಿಯನ್ನು ತಯಾರಿಸಿ ಕೊಡಬೇಕು. ಮಕ್ಕಳು ಅದರ ಸಹಾಯದಿಂದ ಆದಷ್ಟೂ ಹೊಸ ವಾಕ್ಯ ರಚಿಸಲಿ.

3) ತಪ್ಪು ವಾಕ್ಯ ರಚನೆಯನ್ನು ಅಲ್ಲಿಯೇ ಸರಿಪಡಿಸಿ ಅದನ್ನು ಕಾರಣ ಸಹಿತ ವಿವರಿಸಬೇಕು.

4) ಚಿತ್ರ ತೋರಿಸಿ ಪ್ರಬಂಧ ಬರೆಯಿಸಬೇಕು. ಮೊದಲು ವಾಕ್ಯವನ್ನು ಕೊಡಬೇಕು. ನಂತರ ಬರೀ ಚಿತ್ರ ತೋರಿಸಬೇಕು, ಬರೆಯುವಂತೆ ಉತ್ತೇಜಿಸಬೇಕು ಕಥೆಯ ಚೌಕಟ್ಟು ಕೊಟ್ಟು ಕಥೆ ಬರೆಯಲು ಹೇಳಬಹುದು. ಸುಲಭ /ಸರಳವಾಗಿರುವುದನ್ನು ಕೊಡಬೇಕು. ಮಗುವಿನ ಮಟ್ಟವನ್ನು ನಿರ್ಧರಿಸಿಕೊಂಡು ಸೂಕ್ತ ಚಿತ್ರಗಳನ್ನು ಆರಿಸಬೇಕು. ಶಾಲೆಯಲ್ಲಿ ಇಂತಹ ಚಟುವಟಿಕೆ ಇದ್ದರೆ ಮನೆಯಲ್ಲಿ ಅದಕ್ಕೆ ಸಹಕರಿಸಿ/ಮಗುವಿಗೆ ಸಹಾಯ ಮಾಡಬೇಕು.



ಊ) **ಬರವಣಿಗೆ–ಕಾಗುಣಿತ**

**ಕಾಗುಣಿತದ ತಪ್ಪುಗಳಿಗೆ ಪರಿಹಾರ**

1) ಪ್ರಾರಂಭದಲ್ಲಿ ಜೋರಾಗಿ ಹೇಳಿಕೊಳ್ಳುತ್ತಾ ಬರೆಯಲಿ.

2) ಉಚ್ಚಾರಣೆಗೆ ಸರಿಹೊಂದುವ ಅಕ್ಷರ ಇದೆಯೇ ಎಂದು ಸ್ವತಃ ಪರಿಶೀಲಿಸಲಿ.

3) ಶಬ್ದಕ್ಕೆ ಸರಿ ಹೊಂದುವ ಒತ್ತಕ್ಷರ, ಗುಣಿತಾಕ್ಷರ, ಅಲ್ಪಪ್ರಾಣ, ಮಹಾಪ್ರಾಣಗಳ ಒಂದು ಪಟವನ್ನು ಸುಂದರವಾಗಿ ಆಕರ್ಷಕ ಬಣ್ಣಗಳಿಂದ ತಯಾರಿಸಿ ಮಗುವಿನ ಕಣ್ಣಿಗೆ ದಿನವೂ ಬೀಳುವಂತೆ ಹಾಕಬೇಕು. ಬೇರೆ ಬೇರೆ ವಿಷಯಗಳ ಬಗ್ಗೆ ಈ ತರಹದ ಪಟವನ್ನು ಮಾಡಬಹುದು.

ಆ) **ಗಣಿತದ ಕೌಶಲಗಳನ್ನು ಬೆಳೆಸುವ ವಿಧಾನಗಳು:**

ಕೆಲವು ಸಂದರ್ಭಗಳಲ್ಲಿ ಮಕ್ಕಳಿಗೆ ಭಾಷೆ, ಓದು, ಬರಹದ ನ್ಯೂನತೆಯಿಂದ ಗಣಿತವನ್ನು ಕಲಿಯಲು ಕಷ್ಟವಾಗುತ್ತದೆ. ಆದ್ದರಿಂದ, ಗಣಿತದಲ್ಲಿ ತೊಂದರೆ ಇರುವ ಮಕ್ಕಳ ಭಾಷಾ ಜ್ಞಾನ, ಓದು ಬರಹ, ರೀತಿಯನ್ನು ಮೊದಲು ಪರೀಕ್ಷಿಸಬೇಕು. ಅಗತ್ಯವಿದ್ದರೆ ಅವುಗಳಿಗೆ ಮೊದಲು ಪರಿಹಾರ ನೀಡಿ, ನಂತರ ಗಣಿತದ ತೊಂದರೆಯನ್ನು ನಿವಾರಿಸಲು ಪ್ರಯತ್ನಿಸಬೇಕು.

**ಗಣಿತ ಕಲಿಯಲು ತೊಂದರೆ ಅನುಭವಿಸುವ ಮಕ್ಕಳಿಗೆ**

1) ಗಣಿತಕ್ಕೆ ಬೇಕಾದ ಮೂಲ ಕಲ್ಪನೆಗಳನ್ನು ಗಳಿಸಲು

2) ಗಣಿತದ ಪರಿಕಲ್ಪನೆಗಳನ್ನು ಬೆಳೆಸಿಕೊಳ್ಳಲು, ಅಥವಾ/ಮತ್ತು

3) ಗಣಿತದ ವಿಧಾನಗಳನ್ನು ಮಾಡಲು ತೊಂದರೆ ಇರುವ ಸಾಧ್ಯತೆಗಳಿವೆ.

ಆದ್ದರಿಂದ, ಮೊದಲು ಮಗುವಿಗೆ ಎಲ್ಲೆಲ್ಲಿ ತೊಂದರೆಇದೆ ಎಂದು ತಿಳಿದುಕೊಂಡು ನಂತರ ಅದಕ್ಕೆ ತಕ್ಕದಾದ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕು.

**ಸಾಮಾನ್ಯ ತತ್ತ್ವಗಳು**

ಮೊದಲಿಗೆ ಕೆಲವು ಸಾಮಾನ್ಯ ತತ್ತ್ವಗಳನ್ನು ತಿಳಿಯೋಣ

1) ಗಣಿತದ ಬಗೆಗೆ ಆತಂಕ ಬೇಡ:– ಗಣಿತ ಎಂದರೆ ನಮ್ಮ ದಿನನಿತ್ಯದ ಜೀವನದಲ್ಲಿ ಬಳಕೆಯಾಗುವ ಒಂದು ವಿಷಯ ಎಂದು ಮಗುವಿಗೆ ಮನವರಿಕೆ ಮಾಡಿಕೊಡಬೇಕು.

2) ಬೋಧನೆಯ ಭಾಷೆ ಸರಳವಾಗಿರಲಿ:– ಕಠಿಣ ಪದಗಳು ಮತ್ತು ಉದ್ದನೆಯ ವಾಕ್ಯಗಳು ಮಗುವಿನ ಗ್ರಹಿಕೆಗೆ ತಡೆಯೊಡ್ಡುತ್ತವೆ. ಆದ್ದರಿಂದ ಗಣಿತವು ಕಷ್ಟವಿರುವ ಮಕ್ಕಳಿಗೆ ಬೋಧಿಸುವಾಗ ಸರಳವಾದ, ಮಗುವಿನ ಮಟ್ಟಕ್ಕೆ ಸೂಕ್ತವಾದ ಪದಗಳನ್ನು ಬಳಸಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಹೇಳಿಕೊಡಬೇಕು.

3) ಗಣಿತದ ಪುಸ್ತಕವನ್ನು ಓದುವ ಅಭ್ಯಾಸ ಬೆಳೆಸಬೇಕು:– ಪಾಠದ ಬಗ್ಗೆ ವಿವರವಾದ ಮಾಹಿತಿಗಳನ್ನು ಗಣಿತದ ಪಠ್ಯ ಪುಸ್ತಕದಲ್ಲಿ ನೀಡಿರುತ್ತಾರೆ. ಅದನ್ನು ಓದಿದರೆ ಒಳ್ಳೆಯದು.

4) ಪ್ರತಿಯೊಂದು ಹಂತದಲ್ಲೂ ಮೌಲ್ಯಮಾಪನಕ್ಕೆ ಆದ್ಯತೆ ನೀಡಿ:- ಬೇರೆಲ್ಲಾ ಶಾಲಾ ಪಠ್ಯ ವಿಷಯಕ್ಕಿಂತ ಗಣಿತದಲ್ಲಿ ಹಿಂದಿನ ತರಗತಿಯ ಪರಿಕಲ್ಪನೆಗಳು ಮುಂದಿನ ಕಲಿಕೆಗೆ ಪೂರಕ. ಮಗುವು ಒಂದಂಕಿ ಕೂಡುವ ಪಾಠ ತಪ್ಪಿಸಿ ಕೊಂಡರೆ ಮುಂದೆ ಎರಡಂಕಿ ಕೂಡುವ ಪಾಠ ಬಂದಾಗ ಅರ್ಥವಾಗುವುದಿಲ್ಲ. ಆದ್ದರಿಂದ ಕ್ಷುಲ್ಲಕ ಕಾರಣಗಳಿಂದಾಗಿ ಶಾಲೆ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳಬೇಕು.

5) ಗಣಿತದಲ್ಲಿ ಬರುವ ವಿಶೇಷ ಪದಗಳನ್ನು ಪಾಠ ಮಾಡುವಾಗ ಪದೇ ಪದೇ ಬಳಸಬೇಕು.

ಉದಾ: ಸಂಕಲನ, ಬಿಡಿ, ಸ್ಥಾನಬೆಲೆ –ಇತ್ಯಾದಿ.

6) ದಿನ ನಿತ್ಯದ ಜೀವನದಲ್ಲಿ ಅಳವಡಿಸಿಕೊಂಡಂತೆಯೇ ಗಣಿತದ ಪರಿಕಲ್ಪನೆಗಳನ್ನು ಮೂಡಿಸಬೇಕು. ಇದರಿಂದ ಗಣಿತದ ಕಲಿಕೆಯೆ ಸಂತಸದಾಯಕವಾಗುತ್ತದೆ.

7) ಗಣಿತದಲ್ಲಿ ಬರುವ ಅಮೂರ್ತ ಕಲ್ಪನೆಗಳನ್ನು ಆದಷ್ಟೂ ಮೂರ್ತೀಕರಿಸಿ, ಎಂದರೆ ಕಣ್ಣಿಗೆ ಕಾಣಬರುವ ವಸ್ತುಗಳ ಮೂಲಕ ಕಲಿಸಬೇಕು

**ಉದಾಹರಣೆಗೆ:**

ಅ) ಗಣಗಳು – ಮಗುವಿನ ಕಲ್ಪನೆಗೆ ನಿಲುಕುವ ಹೂವು, ಹಣ್ಣು ವಿದ್ಯಾರ್ಥಿಗಳು ಇಂತಹ ಉದಾಹರಣೆಯ ಮೂಲಕ ಪರಿಕಲ್ಪನೆ ಮೂಡಿಸಬೇಕು.

ಆ) ಕೋನಗಳು – ಹಾಗೆಯೆ ಕೋನಗಳ ವಿಧ'ಗಳನ್ನು ಹೇಳುವ ಬದಲು ತರಗತಿಯಲ್ಲಿರುವ ವಿವಿಧ ಕೋನಗಳನ್ನು ಗುರುತಿಸಲು ಹೇಳಬೇಕು. ಬಿದಿರು ಕಡ್ಡಿಗಳ ಸಹಾಯದಿಂದ ವಿವಿಧ ಕೋನಗಳನ್ನು ರಚಿಸಲಿ, ನಂತರ ವಿಧಗಳಿಗನುಸಾರವಾಗಿ ವರ್ಗೀಕರಿಸಲಿ.

8) ರಟ್ಟಿನ ಕಾಗದ, ಜೇಡಿಮಣ್ಣು, ಬಿದಿರಿನ ಕಡ್ಡಿಗಳು, ಬಣ್ಣದ ಪೆನ್ಸಿಲ್ಲು ಇವು ಯಾವಾಗಲೂ ಇರಲಿ. ಗಣಿತದ ಕಲ್ಪನೆಗಳನ್ನು ಮೂಡಿಸಲು ಅಗತ್ಯವೆನಿಸುವ ಚಟುವಟಿಕೆಗಳನ್ನು ಮಾಡಲು ಇವು ಸಹಾಯಕವಾಗುತ್ತವೆ.

9) ಒಂದೇ ಅರ್ಥ ನೀಡುವ ವಿವಿಧ ಪದಗಳನ್ನು ಮಕ್ಕಳಿಗೆ ಹೇಳಿಕೊಡಬೇಕು. ಇಲ್ಲದಿದ್ದರೆ ಆ ಪದವನ್ನು ಕೇಳಿದ ಮಗುವು ಇದು ನನಗೆ ತಿಳಿಯದ ಯಾವುದೋ ವಿಷಯ ಎಂದು ಯೋಚಿಸಲು ಹೋಗದೆ ಇರಬಹುದು.

10) ಸ್ಥಾನ ಬೆಲೆಯ ಪರಿಕಲ್ಪನೆಯನ್ನು ಎರಡು ಅಂಕಿಯ ಸಂಖ್ಯೆಯನ್ನು ಉಪಯೋಗಿಸುವಾಗಲೇ ಸರಿಯಾಗಿ ಹೇಳಿಕೊಡಬೇಕು.

11) ಬಾಯಿ ಪಾಠ ಮಾಡಿಸುವಾಗಲೂ ಅದರ ಅರ್ಥ ಹೇಳಿಕೊಡಬೇಕು (ಮಗ್ಗಿ ಕಲಿಯುವುದು).

12) ಗಣಿತದ ಮೂಲ ಪ್ರಕ್ರಿಯೆಗಳನ್ನು ಮೊದಲು ಮಾಡಿಸುವಾಗ ಅವುಗಳ ವಿಧಾನವನ್ನು ನೆನಪಿಟ್ಟುಕೊಳ್ಳಲು ಬಣ್ಣದ ನಕ್ಷತ್ರ, ಬಾಣ ಹೀಗೆ ಏನಾದರೂ ಗುರುತು ಇಟ್ಟು ಕೊಳ್ಳುವಂತೆ ಹೇಳಿ ನಿಧಾನವಾಗಿ ಇದನ್ನು ತೆಗೆಯಬೇಕು.

```
     *
2+250___        360 ↓      –ಇತ್ಯಾದಿ
              – 252
              -----
```

13) ಕಲಿಯುವ ಹಂತದಲ್ಲಿ ಮಗ್ಗಿಯ ಪುಸ್ತಕ, ಸಂಖ್ಯೆ, ಪಟ, ಇವುಗಳನ್ನು ಮಕ್ಕಳಿಗೆ ಕಾಣುವಂತೆ ಆಕರ್ಷಕ ಚಿತ್ರ ಹಾಗೂ ಬಣ್ಣದಿಂದ ಕೊಠಡಿಯಲ್ಲಿ ತೂಗುಹಾಕಬೇಕು. ಇಲ್ಲದಿದ್ದರೆ ಮಗುವು ಬೇಕೆಂದಾಗ ಉಪಯೋಗಿಸುವಂತೆ ಮೇಜಿನಲ್ಲಿ ಜೋಡಿಸಿ ಕೊಡಬೇಕು.

## ಪೋಷಕರಿಗಾಗಿ ಕೆಲವು ಮಾರ್ಗದರ್ಶಿ ಸೂತ್ರಗಳು

1) ಮಗುವು ಪದೇ ಪದೇ ಕ್ಷುಲ್ಲಕ ಕಾರಣಗಳಿಗಾಗಿ ತರಗತಿಗೆ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳೋಣ.
2) ಮಗುವಿನ ಮನೆ ಕೆಲಸವನ್ನು ಆಸಕ್ತಿಯಿಂದ ಗಮನಿಸಿ ಸಹಾಯ ಮಾಡೋಣ.
3) ಒಂದೇ ರೀತಿಯ ಹಲವು ಸಮಸ್ಯೆಗಳನ್ನು ಮಾಡಿಸೋಣ.
4) ಸುಲಭ ವಿಧಾನಗಳನ್ನು ಆದಷ್ಟು ಹೇಳಿ ಕೊಡೋಣ (9ರ ಮಗ್ಗಿ ಇತ್ಯಾದಿ).
5) ಪ್ರತಿ ದಿನವೂ ಪುಸ್ತಕವನ್ನು ನೋಡಿ ಮಗುವು ಮಾಡದೆ ಬಿಟ್ಟ ಲೆಕ್ಕಗಳನ್ನು ಅಲ್ಲಲ್ಲೇ ಮಾಡಿಸೋಣ (ಗದರಿಸುವುದು, ಹೊಡೆಯುವುದು ಇವು ಸಮಸ್ಯೆಗೆ ಪರಿಹಾರವಲ್ಲ)
6) ಅನಾವಶ್ಯಕವಾಗಿ ಮನೆ ಪಾಠಕ್ಕೆ ಕಳುಹಿಸಬೇಡ .
7) ಮಕ್ಕಳ ದಿನಚರಿಯನ್ನು ತಯಾರಿಸಿ ಅದರಂತೆ ಅವರು ನಡೆಯುತ್ತಾರೆಯೇ ಎಂಬುದನ್ನು ದೃಢಪಡಿಸಿಕೊಳ್ಳೋಣ.
8) ಗಣಿತಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಬಿಡಿಸುವಂತೆ ಪ್ರೇರೇಪಿಸೋಣ (ವೃತ್ತ ಪತ್ರಿಕೆಗಳಲ್ಲಿ)
9) ಶಾಲೆಯಲ್ಲಿ ಕಲಿತ ಪರಿಕಲ್ಪನೆಯನ್ನು ದಿನ ನಿತ್ಯದ ಚಟುವಟಿಕೆಯಲ್ಲಿ ಬರುವಂತೆ ನೋಡಿಕೊಳ್ಳೋಣ.
10) ಮಗುವು ಸ್ವತ: ಓದುವ ಸಮಯವನ್ನು ನಿಗದಿ ಪಡಿಸಿಕೊಳ್ಳಲಿ.
11) ಮಗುವಿಗೆ ಇಷ್ಟ ಇರುವ ಬೇರೆ ಚಟುವಟಿಕೆಗಳಿಗೂ ದಿನಚರಿಯಲ್ಲಿ ಸಾಕಷ್ಟು ಸಮಯಕೊಡೋಣ.
12) ದೂರದರ್ಶನ ವೀಕ್ಷಣೆಯನ್ನು ನಿಗದಿತ ಸಮಯದಲ್ಲಿ ಮಾತ್ರ ಇರಿಸಿಕೊಳ್ಳೋಣ.
13) ಪರೀಕ್ಷೆಯ ತಯಾರಿಗೂ ಸಮಯ ಕೊಡೋಣ

( ಸೂಚನೆ: ಇಲ್ಲಿ ಕೊಟ್ಟಿರುವ ಪರಿಹಾರೋಪಾಯಗಳು ನಿಮಗೆ ಒಂದು ಮಾರ್ಗದರ್ಶನ ಮಾತ್ರ. ಕಲಿಕಾ ನ್ಯೂನತೆಯಿಂದ ತೊಂದರೆ ಅನುಭವಿಸುವ ಮಕ್ಕಳಿಗೆ ಹೇಳಿಕೊಡಲು ಎಲ್ಲಾ ಸೂತ್ರಗಳು ಇಲ್ಲಿ ಕೊಡಲು ಆಗುವುದಿಲ್ಲ ಮತ್ತು ಪ್ರತಿಯೊಂದು ಮಗುವಿಗೆ ಇರುವ ಸಮಸ್ಯೆಯೂ ಭಿನ್ನವಾಗಿರುವುದರಿಂದ ನೀವು ಇಲ್ಲಿ ಕೊಟ್ಟಿರುವ ತತ್ತ್ವಗಳನ್ನು ಉಪಯೋಗಿಸಿಕೊಂಡು ಮುಂದುವರಿಯುತ್ತಾ ಹೋಗಿ. ಹಾಗೆಯೇ ಮಗುವಿಗೆ ಬೇಕೆನಿಸುವ ವಿಧಾನವನ್ನು ಅಲ್ಲಲ್ಲೇ ನೀವೇ ಅಳವಡಿಸಿಕೊಳ್ಳಿ. ಮಕ್ಕಳೇ ಅವರ ತೊಂದರೆಯನ್ನು ತೋರ್ಪಡಿಸಿಕೊಳ್ಳುವ ಮೂಲಕ ನಿಮಗೆ ಸದಾ ದಾರಿ ತೋರಿಸುತ್ತಾರೆ.)

**ನಿರ್ದಿಷ್ಟ ಪಠ್ಯವನ್ನು ಹೀಗೆ ಕಲಿಸಬೇಕು**

ಈ ಮೇಲೆ ತಿಳಿಸಿರುವ ಸಾಮಾನ್ಯ ತತ್ತ್ವಗಳನ್ನು ಮನಸ್ಸನಲ್ಲಿ ಇಟ್ಟುಕೊಂಡು ನಿರ್ದಿಷ್ಟ ಪಠ್ಯವನ್ನು ಕಲಿಸಿ, ಗಣಿತದ ಮೂಲಕಲ್ಪನೆ, ಸಂಖ್ಯಾ ಪರಿಕಲ್ಪನೆ ಹಾಗೂ ಮೂಲ ಪ್ರಕ್ರಿಯೆಗಳಾದ ಕೂಡುವುದು, ಕಳೆಯುವುದು, ಗುಣಿಸುವುದು ಮತ್ತು ಭಾಗಿಸುವುದು–ಇವುಗಳನ್ನು ಹೇಳಿಕೊಡಲು ಕೆಲವು ಸೂತ್ರಗಳನ್ನು ಇಲ್ಲಿ ಕೊಡಲಾಗಿದೆ.

## ಮೂಲ ಕಲ್ಪನೆಗಳು:

**ಅ) ಗಣಿತದ ಮೂಲ ಕಲ್ಪನೆ :**

ಔಪಚಾರಿಕವಾಗಿ ಗಣಿತವನ್ನು ಕಲಿಯಲು ಮೂಲ ಭಾಷಾ ಕಲ್ಪನೆಗಳಾದ ಸ್ಥಳ ಸಂಬಂಧಿತ (spatial) ಕಾಲ ಸಂಬಂಧಿತ (temporal) ಮತ್ತು ಪರಿಮಾಣ ಸಂಬಂಧಿತ (quantitative) ಕಲ್ಪನೆಗಳು ಅವಶ್ಯಕ. ಮಕ್ಕಳು ತಮ್ಮ ಪರಿಸರದಿಂದ 4–5 ವಯಸ್ಸಿನೊಳಗೆ ಇವೆಲ್ಲವನ್ನೂ ಸ್ವಾಭಾವಿಕವಾಗಿಯೇ ಗಳಿಸಿಕೊಂಡಿರುತ್ತಾರೆ. ಆದರೆ ಕಲಿಕಾ ನ್ಯೂನತೆಯಿರುವ ಮಕ್ಕಳಿಗೆ ಇವುಗಳನ್ನು ಚಟುವಟಿಕೆಗಳ ಮೂಲಕ ಉದ್ದೇಶ ಪೂರ್ವಕವಾಗಿ ಕಲಿಸಬೇಕು.

1) **ಸ್ಥಳ ಸಂಬಂಧಿತ:** ಮೇಲೆ, ಕೆಳಗೆ, ಹತ್ತಿರ, ದೂರ, ಎಡ, ಬಲ ದೊಡ್ಡದು, ಚಿಕ್ಕದು, ಹಿಂದೆ, ಮುಂದೆ, ಉದ್ದ, ತುಂಡು (ಇಂತಹಾ ಕಲ್ಪನೆಗಳನ್ನು ಆಟಗಳು ಕಥೆಗಳು ಹಾಗೂ ಇತರ ಚಟುವಟಿಕೆಗಳ ಮೂಲಕ ಮಾಡಿ ಹೇಳಿಕೊಡಬೇಕು).
2) **ಕಾಲ ಸಂಬಂಧಿತ:** ಮೊದಲು, ನಂತರ, ಈಗಾಗಲೇ, ಕೊನೆಗೆ....
3) **ಪರಿಮಾಣ ಸಂಬಂಧಿತ ಕಲ್ಪನೆಗಳು:** ಬಹಳ, ಅಷ್ಟು, ಎಷ್ಟು, ಸಮ, ಹೆಚ್ಚು, ಕಡಿಮೆ–ಇತ್ಯಾದಿ. ಇಂತಹಾ ಕಲ್ಪನೆಗಳನ್ನು ಆಟಗಳು, ಕಥೆಗಳು ಹಾಗೂ ಇತರ ಚಟುವಟಿಕೆಗಳ ಮೂಲಕ ಮಾಡಿ ಹೇಳಿಕೊಡಬೇಕು.

**ಆ) ಸಂಖ್ಯಾ ಪರಿಕಲ್ಪನೆ**

ಸಂಖ್ಯಾ ಪರಿಕಲ್ಪನೆಯು ಒಂದು ಅಮೂರ್ತ ಕಲ್ಪನೆ. ನಾವು ಬಳಸುವ ಅಂಕಿಗಳು ಸಂಕೇತ ಮಾತ್ರ. ಸಂಕೇತಗಳಿಗೆ ವಸ್ತುಗಳನ್ನು ಹೊಂದಾಣಿಕೆ ಮಾಡಿ, ಮೊದಲಿಗೆ ಸಂಖ್ಯೆಗಳ ಕಲ್ಪನೆಯನ್ನು ಮೂಡಿಸಬೇಕು.

1) ಕಲ್ಲು, ಎಲೆ, ಚೆಂಡು, ಮಕ್ಕಳು ಹೀಗೆ ಪರಿಸರದಲ್ಲಿ ಲಭ್ಯವಿರುವ ವಸ್ತುಗಳ ಸಹಾಯದಿಂದ ಸಂಖ್ಯೆಯ ಅಮೂರ್ತ ಕಲ್ಪನೆಯನ್ನು ಮೂರ್ತಗೊಳಿಸಬೇಕು.
2) ಸಂಖ್ಯೆಗಳನ್ನು ಹೇಳುವ ಕ್ರಮ ಮುಂದುವರಿದಂತೆಯೇ ಪ್ರಮಾಣ ಹೆಚ್ಚುತ್ತದೆ ಎಂದು ಚಟುವಟಿಕೆಗಳ ಮೂಲಕ ತೋರಿಸಬೇಕು.
3) ಹಿಂದಿನಿಂದ ಸಂಖ್ಯೆಗಳನ್ನು ಹೇಳಲು ಪ್ರೋತ್ಸಾಹಿಸಬೇಕು.
4) ಹಿಂದಿನ/ಮುಂದಿನ ಹೆಚ್ಚು/ಕಡಿಮೆ, ದೊಡ್ಡ/ಚಿಕ್ಕ ಸಂಖ್ಯೆಗಳನ್ನು ಗುರುತಿಸುವಂತೆ ಮಾಡಬೇಕು.
5) ಸಂಖ್ಯೆಗಳನ್ನು ಒಳಗೊಂಡ ಹಲವಾರು ಒಳಾಂಗಣ ಮತ್ತು ಹೊರಾಂಗಣ ಆಟಗಳನ್ನು ಆಡಿಸಬೇಕು.
   **ಉದಾ:** ಹಾವು ಏಣಿ ಆಟ, ಲಗೋರಿ ಆಟ ಇತ್ಯಾದಿ
6) ಸ್ಥಾನ ಬೆಲೆಯನ್ನು ಕೂಡ ಚಟುವಟಿಕೆಯಿಂದಲೇ ಹೇಳಿಕೊಡಬೇಕು. ಸ್ಥಾನ ಮತ್ತು ಬೆಲೆ ಎರಡರ ವ್ಯತ್ಯಾಸ ತಿಳಿಸಿ ಮೊದಲಿಗೆ ವಿವಿಧ ಸ್ಥಾನವನ್ನು ಗುರುತಿಸಲು ಬಣ್ಣದ ಪೆನ್ಸಿಲನ್ನು ಉಪಯೋಗಿಸಿ, ಚಿಕ್ಕ ಡಬ್ಬಗಳು ಹಾಗೂ ಮಣಿಕಟ್ಟಿನ ಸಹಾಯದಿಂದಲೂ ಇದನ್ನು ಮಾಡಬಹುದು.

7) ಒಂದಂಕಿಯ ಸಂಖ್ಯೆಗಳನ್ನು ಉಪಯೋಗಿಸುವಲ್ಲಿ ಪ್ರಾವೀಣ್ಯತೆ ಪಡೆದವರಿಗೆ ಮತ್ತು ಅದಕ್ಕೆ ಮೇಲ್ಪಟ್ಟ ಸಂಖ್ಯೆಗಳನ್ನು ಉಪಯೋಗಿಸಿ, ಮೊದಲು ಕಲಿತದ್ದು ಮನವರಿಕೆಯಾಗಿದ್ದರೆ ಕಲಿಕೆಯ ವರ್ಗಾವಣೆಯಿಂದ ಮುಂದಕ್ಕೆ ಬೇಗನೆ ಕಲಿಯುತ್ತಾರೆ.

8) ಏರಿಕೆ, ಇಳಿಕೆಯ ಕ್ರಮಗಳನ್ನು ಹಾವು ಏಣಿ ಆಟ, ಮೆಟ್ಟಿಲು ಏರುವುದು, ಇಳಿಯುವುದು ಇವುಗಳೊಡನೆ ಹೋಲಿಸಿ ಮನದಟ್ಟು ಮಾಡಿಸಬೇಕು

9) ಸಂಖ್ಯೆಗಳನ್ನು ಉಪಯೋಗಿಸಿ ಪುಟ್ಟ ಪುಟ್ಟ ಕಥೆಗಳನ್ನು ಹೇಳಬೇಕು.

10) ಅಂಕೆ ಸಂಖ್ಯೆಗಳ ಆಕರ್ಷಕ ಪಟಗಳನ್ನು ಮಾಡಿ ಮಗುವಿಗೆ ಯಾವಾಗಲೂ ಕಾಣುವಂತೆ ತೂಗು ಹಾಕಬೇಕು.

### ಇ) ಗಣಿತದ ಮೂಲ ಪ್ರಕ್ರಿಯೆಗಳು

ಗಣಿತದ ಮೂಲ ಪ್ರಕ್ರಿಯೆಗಳಾದ ಸಂಕಲನ, ವ್ಯವಕಲನ , ಗುಣಾಕಾರ ಹಾಗೂ ಭಾಗಾಕಾರಗಳನ್ನು ಮಾಡಲು ಸಂಖ್ಯಾ ಪರಿಕಲ್ಪನೆಯಲ್ಲಿ ಪ್ರಾವೀಣ್ಯತೆ ಗಳಿಸುವುದು ಮುಖ್ಯ (ಕೆಳಗಡೆ ನೀಡಿದ ವಿವರಣೆಯಲ್ಲಿ ಕೂಡುವುದನ್ನು ಉದಾಹರಣೆಯಾಗಿ ತೆಗೆದುಕೊಳ್ಳಲಾಗಿದೆ. ಅದು ಉಳಿದ 3 ಪ್ರಕ್ರಿಯೆಗಳಾದ ಕಳೆಯುವುದು ಗುಣಿಸುವುದು ಮತ್ತು ಭಾಗಿಸುವುದಕ್ಕೂ ಅನ್ವಯವಾಗುತ್ತದೆ).

1) ಮಕ್ಕಳಿಗೆ ದಿನ ನಿತ್ಯದ ಜೀವನದಲ್ಲಿ ಬರುವ ಸಂದರ್ಭಗಳನ್ನು ಬಳಸಿಕೊಂಡು ಕಲಿಸಬೇಕು.

2) ಕಲ್ಲು, ಶಂಖ, ಎಲೆ, ಕಾಳು ಕಡ್ಡಿಗಳನ್ನು ಉಪಯೋಗಿಸಿ ಗಣಿತದ ಪರಿಕಲ್ಪನೆ ಮೂಡಿಸಬೇಕು.

3) ಪರಿಕಲ್ಪನೆ ಮೂಡಿಸಿದ ನಂತರ ವಿಧಾನಕ್ಕೆ ಪ್ರಾಮುಖ್ಯತೆ ಕೊಡಬೇಕು.

4) ಸ್ಥಾನಕ್ಕೆ ಅನುಗುಣವಾಗಿ ಸಂಖ್ಯೆಯನ್ನು ಬರೆಯುವುದು. ಒಂದಕ್ಕೊಂದು ಸಂಖ್ಯೆಗಳನ್ನು ಕೂಡುವುದು, ಅದನ್ನು ಉತ್ತರದಲ್ಲಿ ಬರೆಯುವ ವಿಧಾನ ಇವೆಲ್ಲವನ್ನೂ ಹಂತ ಹಂತವಾಗಿ ಮಾಡಬೇಕು.

5) ಒಂದಂಕಿಯ ಎರಡು ಸಂಖ್ಯೆಗಳನ್ನು ಮೊದಲು ಕೂಡಿಸಿ ನಂತರ ಮೂರು ಅಂಕಿಗಳನ್ನು ಕೂಡಲು ತರಬೇತಿ ಕೊಡಬೇಕು. ಮೊದಲಿಗೆ ಮೊತ್ತವೂ ಒಂದಂಕಿಯಲ್ಲೇ ಇರುವಂತೆ ನೋಡಿಕೊಳ್ಳಬೇಕು. ನಿಧಾನಕ್ಕೆ ಕೂಡಿಸುತ್ತಾ ಬರಲಿ. ಈಗಲೂ ಸಹಾ ಮೊತ್ತ 9ನ್ನು ಮೀರದಿರಲಿ. ಮುಂದಿನ ಹಂತದಲ್ಲಿ 9ನ್ನು ಮೀರಿದ ಮೊತ್ತ ಬರುವಂತೆ ಮಾಡಬಹುದು.

6) ಭಾಷೆಯಲ್ಲಿ ವಾಕ್ಯವೊಂದನ್ನು ಹೇಳಿ, ಅದನ್ನು ಸಂಖ್ಯಾ ರೂಪಕ್ಕೆ ಪರಿವರ್ತಿಸುವಂತೆ ಮಗುವಿಗೆ ಹೇಳಬೇಕು. **ಉದಾ:** "ನಿನ್ನ ಜೊತೆಗೆ ಪಕ್ಕದ ಮನೆಯ ಇಬ್ಬರು ಆಟಕ್ಕೆ ಬಂದರೆ ನೀವು ಒಟ್ಟಿಗೆ ಆಟಕ್ಕೆ ಎಷ್ಟು ಜನ ಬಂದಹಾಗಾಯಿತು? = 1+2=3 ಎಂದು ಮಾಡಿ ಮೂರು ಜನ ಎಂದು ಹೇಳುವಂತಾಗಬೇಕು.

7) ಸಂಖ್ಯೆಗಳು ಎರಡರಿಂದ ಮೂರಕ್ಕೆ ಮೂರರಿಂದ ನಾಲ್ಕಕ್ಕೆ ಏರುತ್ತಿದ್ದಂತೆಯೇ ಮಕ್ಕಳಿಗೆ ಕಷ್ಟವಾಗುತ್ತದೆ. ಆದುದರಿಂದ ಬೇರೆ ಬೇರೆ ಸ್ಥಾನವನ್ನು ಬೇರೆ ಬೇರೆ ಬಣ್ಣಗಳಿಂದ ಬರೆಯಬೇಕು.

8) ನಾಲ್ಕು ಪ್ರಕ್ರಿಯೆಗಳಿಗಿರುವ ಚಿಹ್ನೆಗಳನ್ನು ಬಣ್ಣದ ರಟ್ಟಿನಲ್ಲಿ/ಅಥವಾ ಮಕ್ಕಳು ಕಾಗದದಲ್ಲಿ ಮಾಡಿ ಮಗುವಿಗೆ ದಿನಾ ತೋರಿಸಿ ಮಗುವು ಅದನ್ನು ಮುಟ್ಟಿ ನೋಡಿ ಅನುಭವಿಸಲಿ. ಆ ಚಿಹ್ನೆಗಳಿಗಿರುವ ವಿವಿಧ ಪದಗಳನ್ನೂ ಮಕ್ಕಳಿಂದ ಹೇಳಿಸಿ/ಬರೆಸಬೇಕು (**ಉದಾ:** ಕೂಡು, ಪ್ಲಸ್, ಸಂಕಲನ ಇತ್ಯಾದಿ).

9) ಕೂಡುವುದಕ್ಕೂ, ಕಳೆಯುವುದಕ್ಕೂ ಇರುವ ಸಂಬಂಧವನ್ನೂ ಚಟುವಟಿಕೆಗಳ ಮೂಲಕ ತೋರಿಸಬೇಕು. ಹಾಗೆಯೇ ಕೂಡುವುದಕ್ಕೂ, ಗುಣಿಸುವುದಕ್ಕೂ/ ಕಳೆಯುವುದಕ್ಕೂ, ಭಾಗಿಸುವುದಕ್ಕೂ ಇರುವ ಹೋಲಿಕೆಯನ್ನು ಮಾಡಿ ತೋರಿಸಬೇಕು.

## ಸ್ವ - ಅಧ್ಯಯನಕ್ಕೆ ಪ್ರಶ್ನೆಗಳು

1) ಪರಿಹಾರಾತ್ಮಕ ಬೋಧನೆಯನ್ನು ಮಗುವಿಗೆ ಯಾರಿಂದ ಮಾಡಿಸುವುದು ಸೂಕ್ತ?
2) ನಾವೇ ಇದನ್ನು ಮಾಡಬೇಕಾದರೆ, ನಮಗೆ ಕೆಲವು ಸೂಚನೆಗಳನ್ನು ತಿಳಿಸಿ.
3) ಭಾಷಾ ಬೆಳವಣಿಗೆ ಕುಂಠಿತಗೊಂಡಿದ್ದರೆ ನಾವು ಹೇಗೆ ಪರಿಹಾರ ಒದಗಿಸಬಹುದು?
4) ಓದುವುದಕ್ಕೆ ತೊಂದರೆ ಪಡುವ ಮಕ್ಕಳಿಗೆ ಓದುವ ಕೌಶಲವನ್ನು ಕಲಿಸುವ ಬಗೆ ಹೇಗೆ?
5) ಬರವಣಿಗೆಯನ್ನು ಉತ್ತಮ ಪಡಿಸುವ ವಿಧಾನಗಳಾವುವು?
6) ಗಣಿತ ಹೇಳಿಕೊಡುವುದೇ ಒಂದು ದೊಡ್ಡ ಸಮಸ್ಯೆ. ಗಣಿತವನ್ನು ಮಕ್ಕಳಿಗೆ ಸುಲಭ ರೀತಿಯಲ್ಲಿ ಹೇಳಿ ಕೊಡುವುದನ್ನು ತೋರಿಸಿ.
7) ಗಣಿತದ ಮೂಲ ಕಲ್ಪನೆಗಳನ್ನು ಮಕ್ಕಳಲ್ಲಿ ಹೇಗೆ ಬೆಳೆಸಬಹುದು?
8) ಸಂಖ್ಯಾ ಪರಿಕಲ್ಪನೆಯನ್ನು ಮಕ್ಕಳಿಗೆ ಮನದಟ್ಟಾಗುವಂತೆ ಯಾವ ರೀತಿ ಹೇಳಿಕೊಡಬಹುದು?
9) ಗಣಿತದ ಮೂಲ ಪ್ರಕ್ರಿಯೆಯನ್ನು ಬೋಧಿಸಲು ಇರುವ ಹಂತಗಳನ್ನು ತಿಳಿಸಿ.

# ಅಧ್ಯಾಯ – 4

## ಕಲಿಕಾ ನ್ಯೂನತೆ – ಶಾಪವೇ?

ಮಕ್ಕಳ ಅಂಕಗಳ ಆಧಾರದಲ್ಲೇ ಮಾತನಾಡುವ ಇಂದಿನ ಸಮಾಜದಲ್ಲಿ ಕಡಿಮೆ ಅಂಕಗಳಿಸುವ ಮಕ್ಕಳ ಭವಿಷ್ಯ ಕರಾಳ. ಆದರೆ ಶಾಲೆಯಲ್ಲಿ ಗಳಿಸುವ ಅಂಕಗಳೇ ಮಕ್ಕಳ ಮುಂದಿನ ಭವಿಷ್ಯದ ಮಾನದಂಡವಲ್ಲ. ಇದನ್ನು ಅರಿತು ನಾವೆಲ್ಲರೂ ಈಗ ಕಲಿಕಾ ನ್ಯೂನತೆಯುಳ್ಳ ಮಕ್ಕಳಲ್ಲಿರುವ ಗುಣಾತ್ಮಕ ಅಂಶಗಳನ್ನು ಗುರುತಿಸುವೆಡೆಗೆ ಗಮನ ಹರಿಸಬೇಕಾಗಿದೆ.




ಸಾಮಾನ್ಯವಾಗಿ ಎಲ್ಲರೂ ಮಾಡುವ ತಪ್ಪೆಂದರೆ ಇಂತಹ ಮಕ್ಕಳಿಗೆ ಕಲಿಯಲು ಕಷ್ಟವಿರುವುದನ್ನು ಕಲಿಸಲು ಹೆಚ್ಚಿನ ವೇಳೆ ಹಾಗೂ ಶ್ರಮವನ್ನು ವ್ಯಯಿಸುವುದು ಮತ್ತು ಅದಕ್ಕಾಗಿ ಕಷ್ಟಪಡುವುದು. ಈ ತರಬೇತಿಯ ಜೊತೆ ಜೊತೆಯಾಗಿ ಮಗುವು ಆಸಕ್ತಿ ತೋರುವ ಯಾವುದೇ ಒಂದು ಕ್ಷೇತ್ರದಲ್ಲಿ ತರಬೇತಿ ನೀಡಿದರೆ ತಾನೂ ಕಲಿಯಬಲ್ಲೆ ಎಂಬ ಆತ್ಮ ವಿಶ್ವಾಸ ಅದಕ್ಕೆ ಮೂಡುತ್ತದೆ ಹಾಗೂ ಇದು ಅದರ ಇತರ ಕಲಿಕೆಗೆ ಪೂರಕ ಕೂಡ ಆಗುತ್ತದೆ.

ಉದಾ: ಕೆಟ್ಟ ಕೈಬರಹ ಮತ್ತು ಕಾಗುಣಿತದ ದೋಷವನ್ನು ಹೆಚ್ಚಾಗಿ ಮಾಡುವ ಮಕ್ಕಳಿಗೆ ಅದನ್ನು ಸರಿಪಡಿಸಲು ತರಬೇತಿ ನೀಡಬೇಕು ನಿಜ. ಆದರೆ ಅದರ ಮೇಲೆಯೇ ಒತ್ತು ಹೆಚ್ಚಾದರೆ ಆ ಮಗುವಿಗೆ ಸಾಧ್ಯವಿರುವ ಕ್ಷೇತ್ರದಲ್ಲಿರಬಹುದಾದ ಕಲ್ಪನೆ, ರಚನಾ ಸಾಮರ್ಥ್ಯ ಇತ್ಯಾದಿಗಳು ನಿರ್ಲಕ್ಷ್ಯಕ್ಕೆ ಒಳಗಾಗುವುದು ಖಚಿತ.

ಥಾಮಸ್ ಆಲ್ವ ಎಡಿಸನ್‌ನನ್ನು ಅಪ್ರಯೋಜಕನೆಂದು ಶಾಲೆಯಿಂದ ಹೊರಹಾಕಿದಾಗ ಆತನ ಅಮ್ಮ ನಾನ್ಸಿ ಎಡಿಸನ್ ತನ್ನ ಮಗನ ಪ್ರತಿಭೆಯನ್ನು ಗುರುತಿಸಿ ಪೋಷಿಸದಿದ್ದರೆ ಪ್ರಪಂಚಕ್ಕೆ ದೊಡ್ಡ ನಷ್ಟವಾಗುತ್ತಿತ್ತು. ಶ್ರೇಷ್ಠ ವಿಜ್ಞಾನಿಯಾಗಿ ಪ್ರಪಂಚದಾದ್ಯಂತ ಗುರುತಿಸಿಕೊಂಡ ಎಡಿಸನ್ ಬರವಣಿಗೆಯ ಮೂಲ ಕೌಶಲವನ್ನು ರೂಢಿಸಿಕೊಳ್ಳುವಲ್ಲಿ ಕೊನೆತನಕವೂ ಸಫಲನಾಗಲಿಲ್ಲ. ಇದರಿಂದ ನಾವು ತಿಳಿಯಬೇಕಾದದು ಏನೆಂದರೆ, ಕೆಲವು ಮಕ್ಕಳು ಕೆಲವು ವಿಷಯಗಳಲ್ಲಿ ತೀರಾ ಹಿಂದುಳಿದಿದ್ದರೂ ಕೆಲವೊಂದು ಕ್ಷೇತ್ರಗಳಲ್ಲಿ ಗಣನೀಯ ಎತ್ತರಕ್ಕೆ ಏರಬಲ್ಲರು ಎಂಬುದು.

### ಕಲಿಕಾ ನ್ಯೂನತೆ ಇರುವ ಮಕ್ಕಳಿಗೆ ದೊರೆಯುವ ಹಲವು ಸೌಲಭ್ಯಗಳು

ಮಗುವಿನ ಪೋಷಕರಾಗಿ ನೀವು ನಿಮ್ಮ ಮಗುವಿಗೆ ಇರುವ ಸೌಲಭ್ಯಗಳು ಹಾಗೂ ಸಹಾಯವನ್ನು ನಿರೀಕ್ಷಿಸಿ ಹೋಗಬಹುದಾದ ತಜ್ಞರ ಬಗ್ಗೆ ಮಾಹಿತಿ ಇರಿಸಿಕೊಳ್ಳುವುದು ಒಳ್ಳೆಯದು.

**ನೀವು ಮಾಡಬೇಕಾದುದೇನು?:** ಮೊದಲಿಗೆ ಮಗುವಿನಲ್ಲಿ ಇರಬಹುದಾದ ತೊಂದರೆಯನ್ನು ಖಚಿತಪಡಿಸಿಕೊಳ್ಳಲು, ಹಾಗೂ ಆ ತೊಂದರೆಗಳ ಸೂಕ್ಷ್ಮ ಪರಿಚಯ ಮಾಡಿಕೊಳ್ಳಲು ವೃತ್ತಿ ನಿರತ ತಜ್ಞರ ಬಳಿಗೆ ಹೋಗಿ. ಮನ:ಶಾಸ್ತ್ರಜ್ಞರು, ವಿಶೇಷ ಶಿಕ್ಷಣ ತಜ್ಞರು, ಭಾಷಾ ತಜ್ಞರು, ಸಮಾಜ ಸೇವಾಕರ್ತರು ಹೀಗೆ ಯಾರನ್ನಾದರೂ ಭೇಟಿ ಮಾಡಿ. ಇದಕ್ಕಾಗಿ ನೀವು ಸಮೀಪದ ಆಸ್ಪತ್ರೆ, ವಿಶ್ವವಿದ್ಯಾನಿಲಯದ ಶಿಕ್ಷಣ ವಿಭಾಗ ಅಥವಾ ಮನ:ಶಾಸ್ತ್ರ ವಿಭಾಗ ಇಂತಹ ಸಂಸ್ಥೆಗಳನ್ನು ಸಂಪರ್ಕಿಸಿ.

**ಅ) ಕಲಿಕಾ ನ್ಯೂನತೆಯಿರುವ ಮಕ್ಕಳಿಗೆ ಯಾವುದೇ ಶಾಲೆಯಲ್ಲಿ ಪ್ರವೇಶ ನಿರಾಕರಿಸುವಂತಿಲ್ಲ**

ಕಲಿಕಾ ನ್ಯೂನತೆ ಇರುವ ಮಕ್ಕಳು ಸಾಮಾನ್ಯ ಮಕ್ಕಳಂತೆ ಶಾಲೆಯಲ್ಲಿ ಎಲ್ಲರೊಡನೆ ಬೆರೆತು ಪಾಠ ಪ್ರವಚನದಲ್ಲಿ ಭಾಗಿಯಾಗಬೇಕೆಂಬ ಉದ್ದೇಶದಿಂದ ಅವರಿಗೆ ವಿಶೇಷ ಶಾಲೆಗಳೇನೂ ಇಲ್ಲ. ಆದರೆ, ಯಾವುದೇ ಶಾಲೆಯಲ್ಲಿ ಅವರಿಗೆ ಪ್ರವೇಶ ನಿರಾಕರಿಸುವಂತೆಯೂ ಇಲ್ಲ. ಶಾಲಾ ಶಿಕ್ಷಕರು ಮಕ್ಕಳ ತೊಂದರೆಯನ್ನು ಅರಿತು ಶಿಕ್ಷಣ ನೀಡಬೇಕು.

ಮಗುವಿಗೆ ಕಲಿಕೆಯಲ್ಲಿ ತೀವ್ರ ತರಹದ ತೊಂದರೆ ಇದ್ದರೆ, ಸ್ವಲ್ಪ ಸಮಯ (ಸುಮಾರು ಒಂದು ವರ್ಷದಷ್ಟು) ತಜ್ಞರಿಂದ ತೀವ್ರ ತೆರನಾದ ತರಬೇತಿ ಕೊಡಿಸಬೇಕಾಗುತ್ತದೆ. ನಂತರ ಪೋಷಕರ ಮಾರ್ಗದರ್ಶನದಲ್ಲಿ ಮಗುವು ಶಾಲೆಯಲ್ಲಿ ಮುಂದುವರಿಯಬಹುದು.

**ಆ) ಮಗುವಿನ ತೊಂದರೆಯ ಬಗ್ಗೆ ಪ್ರಮಾಣ ಪತ್ರ**

ಮಗುವಿನ ತೊಂದರೆಯ ಬಗ್ಗೆ ಪ್ರಮಾಣ ಪತ್ರ ಮಾಡಿಸಿಕೊಂಡರೆ ಶಾಲೆಯಲ್ಲಿ ಕೆಲವು ಭಾಷಾ ವಿಷಯಗಳನ್ನು ಅವರು ಪರೀಕ್ಷೆ ತೆಗೆದುಕೊಳ್ಳಬೇಕಿಲ್ಲ. ಪರೀಕ್ಷೆಯಲ್ಲಿ ನಿಗದಿ ಪಡಿಸಿದ ಸಮಯಕ್ಕಿಂತ ಸ್ವಲ್ಪ ಹೆಚ್ಚಿನ ಸಮಯವನ್ನು ಪಡೆದುಕೊಳ್ಳುವ ಸೌಲಭ್ಯವಿದೆ. ಹೆಚ್ಚಿನ ಮಾಹಿತಿಗಾಗಿ ಶಾಲೆಯ ಮುಖ್ಯೋಪಾಧ್ಯಾಯರನ್ನು ಸಂಪರ್ಕಿಸಿ.

**ಇ) ಮುಕ್ತ ಶಾಲೆ, ವಿಶ್ವ ವಿದ್ಯಾಲಯಗಳ ಮೂಲಕ ಪರೀಕ್ಷೆಗೆ ಕೂರಬಹುದು**

ಮಕ್ಕಳಲ್ಲಿ ಸಮಸ್ಯೆ ತೀವ್ರ ತರಹದ್ದಾಗಿದ್ದರೆ ಅಥವಾ ನಿಮಗೆ ಇವೆಲ್ಲಾ ತಿಳಿಯುವಾಗ ಮಗುವಿನ ವಯಸ್ಸು 13–15 ಆಗಿದ್ದರೆ, ಮುಕ್ತ ಶಾಲೆಯ ಮೂಲಕ 7ನೇ ತರಗತಿಯ ಪರೀಕ್ಷೆಗೆ ಇಲ್ಲವೇ 10ನೇ ತರಗತಿಯ ಪರೀಕ್ಷೆಗೆ ಕೂರಿಸಬಹುದು. ತೀರಾ ಕಷ್ಟ ಎನಿಸುವ ವಿಷಯಗಳಿದ್ದರೆ ಅದನ್ನು ಬಿಟ್ಟು ಬೇರೆ ವಿಷಯಗಳನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ ಇಲ್ಲಿ ಇದೆ. ಹೆಚ್ಚಿನ ಮಾಹಿತಿಗಾಗಿ ಕ್ಷೇತ್ರ ಶಿಕ್ಷಣಾಧಿಕಾರಿ, ಅಥವಾ ಜಿಲ್ಲಾ ಕೇಂದ್ರದಲ್ಲಿರುವ ಮುಕ್ತ ಶಾಲೆಯ ಕೇಂದ್ರಕ್ಕೆ ಭೇಟಿ ನೀಡಿ. 18–20 ವರ್ಷಕ್ಕೆ ಮೇಲ್ಪಟ್ಟವರಾದರೆ ಮುಕ್ತ ವಿಶ್ವವಿದ್ಯಾ ನಿಲಯದ ಮೂಲಕ ಪರೀಕ್ಷೆ ತೆಗೆದುಕೊಳ್ಳಬಹುದು. ಆದರೆ ಇದನ್ನೆಲ್ಲಾ ಮಾಡಲು ಅವರಿಗೆ ದಿನ ನಿತ್ಯ ಪೋಷಕರು ಸಹಾಯ ಮಾಡುವುದು ಅವಶ್ಯಕ.

## ಈ ಮಕ್ಕಳ ತರಬೇತಿ ಹಾಗೂ ಅಭಿವೃದ್ಧಿಯಲ್ಲಿ ನಮ್ಮ–ನಿಮ್ಮೆಲ್ಲರ ಜವಾಬ್ದಾರಿ ಏನು?

ಈ ಮಕ್ಕಳ ತರಬೇತಿ ಹಾಗೂ ಅಭಿವೃದ್ಧಿ ಕಾರ್ಯದಲ್ಲಿ ಶಿಕ್ಷಕರ/ಪೋಷಕರ ಹಾಗೂ ಸಮಾಜದ ಜವಾಬ್ದಾರಿ ಬಹಳಷ್ಟು ಇದೆ. ಕಲಿಕಾ ನ್ಯೂನತೆ ಇರುವ ಮಕ್ಕಳನ್ನು ಎಲ್ಲ ಮಕ್ಕಳಂತೆಯೇ ಕಂಡು ಅವರ ಕುಂದು ಕೊರತೆಗಳನ್ನು ನಿವಾರಿಸಲು ಸಹಕರಿಸಿ. ಅವರಿಗೆ ಸೂಕ್ತವಾಗಿರುವ ಉದ್ಯೋಗವನ್ನು ಆರಿಸಲು ಪ್ರೋತ್ಸಾಹಿಸಿ. ಹೀಗಾದರೆ ಅವರು ಕೀಳರಿಮೆಯಿಂದ ನರಳದೆ, ಸ್ವ–ಉದ್ಯೋಗ ಕೈಗೊಂಡು ಸ್ವಾವಲಂಬಿಗಳಾಗಿ ಸಮಾಜದ ಜವಾಬ್ದಾರಿಯುತ, ಉತ್ತಮ ಪ್ರಜೆಗಳಾಗುತ್ತಾರೆ.

## ನೆನಪಿರಲಿ - ನಾವು ಮರೆಯಲೇ ಬಾರದ 23 ಅಂಶಗಳು

1) ಮಗುವನ್ನು ಪ್ರೀತಿ ವಿಶ್ವಾಸದಿಂದ ಕಾಣುವುದು.
2) ಸಮಸ್ಯೆಗೆ ಪರಿಹಾರ ಒದಗಿಸುವುದು.
3) ಆಸಕ್ತಿಯ ವಿಷಯವನ್ನು ಪತ್ತೆ ಹಚ್ಚುವುದು.
4) ಸಮ ವಯಸ್ಕರೊಡನೆ ಹೋಲಿಸದೇ ಇರುವುದು
5) ತಪ್ಪನ್ನು ಎತ್ತಿ ಪದೇ ಪದೇ ಆಡದಿರುವುದು.
6) ಕುರುಡು ಕಲಿಕೆಯನ್ನು ಹೇರದೇ ಇರುವುದು.
7) ಪಠ್ಯೇತರ ಚಟುವಟಿಕೆಗಳಲ್ಲೂ ತೊಡಗಿಸುವುದು.
8) ಚಿಕ್ಕಪುಟ್ಟ ಗಳಿಕೆ/ಸಾಧನೆ (achievement) ಗಳನ್ನು ಹೊಗಳುವುದು (ಆತ್ಮ ವಿಶ್ವಾಸ ಹೆಚ್ಚುತ್ತದೆ).
9) ಚಿಕ್ಕಪುಟ್ಟ ತಪ್ಪುಗಳನ್ನು ಮನ್ನಿಸುವುದು.
10) ತಾಳ್ಮೆ ಕಳೆದುಕೊಂಡು ಮಗುವನ್ನು ಬೈಯ್ಯದಿರುವುದು (ಬೈಯುವುದರಿಂದ ಮಗುವಿನಲ್ಲಿ ಕೀಳರಿಮೆ ಬೆಳೆಯುತ್ತದೆ).
11) ಮಗುವನ್ನು ಮುಂದೆ ಕೂರಿಸಿಕೊಂಡು ಅನವಶ್ಯಕವಾಗಿ ಗಂಟೆಗಟ್ಟಲೆ ಉಪದೇಶ ನೀಡದಿರುವುದು.
12) ಬರೇ ತರಬೇತಿ ನೀಡುವುದಕ್ಕಿಂತ ನಡು ನಡುವೆ ಮಗುವಿನೊಡನೆ ಸೇರಿ ಆಟಗಳನ್ನು ಆಡುವುದು.
13) ಓದುವ ಕೊಠಡಿಯನ್ನು ಮತ್ತು ತನ್ನ ಪುಸ್ತಕ ಚೀಲಗಳನ್ನು ಶುಚಿಯಾಗಿ ಇಟ್ಟುಕೊಳ್ಳಲು ಸಹಕರಿಸುವುದು.
14) ಕೋಣೆಯನ್ನು ತಿಳಿ ಬಣ್ಣಗಳಿಂದ ಕಣ್ಣಿಗೆ, ಮನಸ್ಸಿಗೆ ತಂಪಾಗುವಂತೆ ಸಜ್ಜುಗೊಳಿಸುವುದು.
15) ಮಗುವಿನ ಬೇಕು-ಬೇಡಗಳಿಗೂ ಆದ್ಯತೆ ನೀಡುವುದು.
16) ರಸ್ತೆಯ ಬದಿಯಲ್ಲಿ ಮಾರುವ ಆಹಾರ ವಸ್ತುಗಳ ಮತ್ತು ತಂಪು ಪಾನೀಯಗಳನ್ನು ಸೇವಿಸದಂತೆ ನೋಡಿಕೊಳ್ಳುವುದು. ಜೊತೆಗೆ ತಿಂಗಳುಗಟ್ಟಲೆ ಶೇಖರಿಸಿಡುವ ಆಹಾರ ಪದಾರ್ಥಗಳನ್ನು ಬಳಸದಂತೆ ಎಚ್ಚರಿಕೆ ವಹಿಸುವುದು.
17) ಅತೀ ಆಹಾರ ಸೇವನೆ ಇಂದಿನ ಮಕ್ಕಳಲ್ಲಿ ಸಮಸ್ಯೆಯಾಗಿರುವುದರಿಂದ ಶುಚಿಯಾದ, ರುಚಿಯಾದ, ತಾಜಾ ಆಹಾರವನ್ನು ಅಲ್ಪ ಪ್ರಮಾಣದಲ್ಲಿ ನೀಡುವುದು.
18) ದೂರದರ್ಶನ ವೀಕ್ಷಣೆಗೆ ಸಮಯವನ್ನು ನಿಗದಿಪಡಿಸುವುದು.
19) ಮಗುವಿನ ಅನಿಸಿಕೆಗಳನ್ನು ಗೌರವಿಸುವುದು.
20) ಮಗುವಿಗೆ ಕಷ್ಟವೆನಿಸುವ ಸೂತ್ರಗಳು, ಮಗ್ಗಿಪಟ ಇತ್ಯಾದಿಗಳನ್ನು ಮಗುವಿಗೆ ಕಾಣುವಂತೆ ತೂಗುಹಾಕುವುದು.
21) ಮಗುವಿನ ಮನೆ ಕೆಲಸವನ್ನು ಆಸಕ್ತಿಯಿಂದ ಗಮನಿಸುವುದು.
22) ಅನಾವಶ್ಯಕವಾಗಿ ಮನೆ ಪಾಠಕ್ಕೆ ಕಳುಹಿಸದೇ ಇರುವುದು.
23) ಮಕ್ಕಳ ದಿನಚರಿಯನ್ನು ತಯಾರಿಸಿ ಅದರಂತೆ ಅವರು ನಡೆಯುತ್ತಾರೆಯೇ ಎಂಬುದನ್ನು ದೃಢಪಡಿಸಿಕೊಳ್ಳುವುದು.

## ಸ್ವ -ಅಧ್ಯಯನಕ್ಕಾಗಿ ಪ್ರಶ್ನೆಗಳು

1) ಇಷ್ಟೆಲ್ಲಾ ತೊಂದರೆಗಳನ್ನು ಅನುಭವಿಸುವ ಮಕ್ಕಳು ಜೀವನದಲ್ಲಿ ಏನನ್ನಾದರೂ ಸಾಧಿಸಲು ಸಾಧ್ಯವೇ?
2) ಕಲಿಕಾ ನ್ಯೂನತೆಯಿರುವ ಮಕ್ಕಳಿಗಿರುವ ಶೈಕ್ಷಣಿಕ ಸೌಲಭ್ಯಗಳಾವುವು?
3) ಇವರಿಗೆ ಶಾಲೆಯಲ್ಲಿ ಕಲಿಯಲು ಸಾಧ್ಯವೇ ಇಲ್ಲ ಎಂಬ ಪರಿಸ್ಥಿತಿ ಬಂದರೆ ನಾವು ಏನು ಮಾಡಬಹುದು?

## ನಮ್ಮ ಸಂಸ್ಥೆಯ ಜನಶಿಕ್ಷಣ ಸಾಹಿತ್ಯದ ಪ್ರಕಟಣೆಗಳು

| | |
|---|---|
| ■ ಶ್ರವಣನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ಕೈಪಿಡಿ | ರೂ. 10/- |
| ■ ಸೀಳು ತುಟಿ ಹಾಗೂ ಸೀಳು ಅಂಗುಳು-ಪೋಷಕರಿಗೊಂದು ಕೈಪಿಡಿ | ರೂ. 10/- |
| ■ ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು -ಬಳಸುವವರ ಕೈಪಿಡಿ | ರೂ. 50/- |
| ■ ಶಾಲಾಪೂರ್ವ ತರಬೇತಿ ಕಾರ್ಯಕ್ರಮಗಳು | ರೂ. 10/- |
| ■ ಶ್ರವಣದೋಷ ತಡೆಗಟ್ಟುವಿಕೆಗೆ ಅನುಸರಿಸಬೇಕಾದ ಕ್ರಮಗಳು | ರೂ. 10/- |
| ■ ನಮ್ಮ ಮನೆಯಂಗಳದ ಹೂವು - ಸಚಿತ್ರ ಪುಸ್ತಕ | ರೂ. 15/- |
| ■ ಕಿವಿಮಾತು - ಕಿರುನಾಟಕ | ರೂ. 15/- |
| ■ ಸಫಲತೆಗಿದುವೆ ಸರಿದಾರಿ - ಬೀದಿನಾಟಕ | ರೂ. 15/- |
| ■ ಮೋನಿ ನಿಜಕೂ ಧೀರ - ಕಥನ ಗೀತೆ | ರೂ. 15/- |
| ■ ಪತ್ರ ಹೇಳಿದ ಕಥೆ - ಕಥನ ಪುಸ್ತಕ | ರೂ. 15/- |
| ■ ನಮ್ಮೊಳಗೊಬ್ಬರು - ಕಥನ ಪುಸ್ತಕ | ರೂ. 15/- |

| | |
|---|---|
| ■ **25 Golden Rules for Parents of Children with Hearing Impairment** | **Rs. 10/-** |
| ■ **Preschool Training Program for Children with Communication Disorders** | **Rs. 10/-** |
| ■ **Break the Barrier of Silence – Cochlear Implant** | **Rs. 25/-** |
| ■ **Things You Always Wanted to Know About Learning Disability** | **Rs. 25/-** |
| ■ **Toy Kit for Kids with Developmental Disabilities** | **Rs. 50/-** |

# ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು

ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಇಂದು ದೇಶವು ಹೆಮ್ಮೆಪಡುವಂತಹ ಸಂಸ್ಥೆಯಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್-ಶ್ರವಣ ನ್ಯೂನತೆಯುಳ್ಳ ಜನರ ಸೇವೆಗೆ ಕಟಿಬದ್ಧವಾಗಿ ನಿಂತಿದೆ. ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ. ಸಂಸ್ಥೆಯ ಶಾಲಾಪೂರ್ವ ತರಬೇತಿ ಕೇಂದ್ರದಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆಯಲು ಅರ್ಹರನ್ನಾಗಿ ಮಾಡಲು ತರಬೇತಿ ನೀಡಲಾಗುತ್ತಿದೆ. ಸಂಸ್ಥಯಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳು 'ಅಂಗವಿಕಲರು' ಎನ್ನಿಸಿಕೊಳ್ಳುವುದಿಲ್ಲ. ಇಂತಹ ಮಕ್ಕಳನ್ನು 'ವಿಶೇಷ ಅರ್ಹತೆಯುಳ್ಳವರು' ಎಂದು ಪರಿಗಣಿಸಲಾಗುತ್ತದೆ. ಮಕ್ಕಳಲ್ಲಿರುವ ಈ 'ವಿಶೇಷ ಅರ್ಹತೆಗಳನ್ನು' ಬೆಳಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ನಮ್ಮ ಸಂಸ್ಥೆಯ ಮುಖ್ಯ ಆಶಯ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರ ಬಹಳ ಮುಖ್ಯ.




**ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ**

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ದೂರವಾಣಿ: 2514449, 2515410, 2515805 ಟೆಲಿಫ್ಯಾಕ್ಸ್: 2510515

ಇ-ಮೇಲ್:aiish_dir@yahoo.com ವೆಬ್‌ಸೈಟ್: www.aiishmysore.com